ಶ್ರೀ ಕಾಶೀನಾಥಗ್ರಂಥಮಾಲಾ

ಚತುರ್ವಿಂಶತಿತಮಪುಷ್ಪ

# ಸನ್ಯಾಸಾಶ್ರಮವಿಮರ್ಶ ತತ್ತ್ವಸ್ಥಿರೀಕರಣ

...ಂಥಕರ್ತರು :

...ಗುರುಸಿದ್ಧಶಾಸ್ತ್ರಿಗಳು

(...ರನೆಯ ಆವೃತ್ತಿ)



ಮೈಸೂರು.
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
1934

ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಸನ್ಯಾಸಾಶ್ರಮವಿಮರ್ಶ ತತ್ತ್ವಸ್ಥಿರೀಕರಣ

ಗ್ರಂಥಕರ್ತರು :

ಪಂಡಿತ ಬಿ. ಗುರುಸಿದ್ಧಶಾಸ್ತ್ರಿಗಳು

ಮೂರನೆಯ ಆವೃತ್ತಿ

ಮೈಸೂರು :
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,
1934

ಬೆಲೆ ೬ ಆಣೆ

ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಪ್ರಸ್ತಾವನೆ

**ನಗುರೋರಧಿಕಂ ನಗುರೋರಧಿಕಂ ನಗುರೋರಧಿಕಂ**
**ವಿದಿತಂ ವಿದಿತಂ ವಿದಿತಂ**
**ಶಿವಶಾಸನತಃ ಶಿವಶಾಸನತಃ ಶಿವಶಾಸನತಃ ||**

ಧರ್ಮಶಾಸ್ತ್ರದ ಯಥಾರ್ಥತತ್ತ್ವವನ್ನು ಹುಡುಕಲಿಚ್ಛೆಯುಳ್ಳ ವೀರಶೈವಮಹನೀಯರೇ! ಈಗ್ಗೆ ಸುಮಾರು ೫ ತಿಂಗಳುಗಳ ಪೂರ್ವದಲ್ಲಿ ವೀರಶೈವ ಧರ್ಮಶಾಸ್ತ್ರದ ಯಥಾರ್ಥ ತತ್ತ್ವಜ್ಞರೆಂದು ಜಗದ್ವಿಖ್ಯಾತರಾಗಿರುವ ನಾಗನೂರು ಬೃಹನ್ಮಠಾಧ್ಯಕ್ಷ ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳವರು ಸದ್ಯಃ ಪ್ರವರ್ತಿಸುತ್ತಿರುವ ವಿರಕ್ತಾಶ್ರಮಿಗಳ ದುರ್ವರ್ತನವನ್ನು ವೇದೋಪನಿಷದಾಗಮಾದಿ ಪರಮಪ್ರಮಾಣೀಭೂತ ಗ್ರಂಥಗಳ ಆಧಾರಗಳಿಂದ ಖಂಡಿಸಿ ಪ್ರಾಚೀನವೈದಿಕಸನ್ಯಾಸಧರ್ಮವನ್ನು ಸ್ಥಿರಗೊಳಿಸಿ, "ಶ್ರೀಮದ್ವೀರಶೈವ ಬ್ರಾಹ್ಮಣಾನಾಂ ಸನ್ಯಾಸಾಶ್ರಮವಿಮರ್ಶಃ" ಎಂಬ ಹೆಸರಿನಿಂದ ಸಂಸ್ಕೃತಭಾಷೆಯಲ್ಲಿ ಒಂದು ಪುಸ್ತಕವನ್ನು ಬರೆದು ಜಗತ್ತಿನಲ್ಲಿ ಪ್ರಸಿದ್ಧಮಾಡಿರುವ ವಿಷಯವು ಎಲ್ಲರಿಗೂ ತಿಳಿದುದಾಗಿದೆ. ಆ ಗ್ರಂಥದಲ್ಲಿ ಪಂಡಿತರು ಪ್ರತಿಪಾದಿಸಿರುವುದೇನೆಂದರೆ—ವೇದೋಪನಿಷದಾಗಮಾದಿಗಳ ಅಭಿಪ್ರಾಯದಂತೆ ಸರ್ವವೈದಿಕ ಮತದವರು ಸ್ವಮತಸ್ಥಾಪನಾಚಾರ್ಯರಲ್ಲಿಯೇ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಮುಕ್ತಿಭಾಗಿಗಳಾಗುತ್ತಾರೆ; ಅದರಂತೆ ಪರಮವೈದಿಕರಾದ ವೀರಶೈವರಾದರೂ ಪೂರ್ವದಲ್ಲಿ ಇದೇ ವೈದಿಕ ಪದ್ಧತಿಯಂತೆ ಸ್ವಮತಸ್ಥಾಪನಾಚಾರ್ಯರಲ್ಲಿಯೇ ಸ್ವಶಿಷ್ಯೋತ್ತಮತ್ವವನ್ನು ಪ್ರಕಟಿಸಿ, ಅವರ ಕಡೆಯಿಂದಲೇ ಸನ್ಯಾಸಾಶ್ರಮವನ್ನು

(ವಿರಕ್ತಾಶ್ರಮವನ್ನು) ತೆಗೆದುಕೊಂಡು ಮುಕ್ತಿಭಾಗಿಗಳಾಗುತ್ತಿದ್ದರು. ಆದರೆ ಕ್ರಿಸ್ತಶಕದ ೧೨ನೆಯ ಶತಮಾನದಿಂದೀಚೆಗೆ ಇವರು ಈ ವೈದಿಕ ಪದ್ಧತಿಯನ್ನು ಬಿಟ್ಟು ಅದಕ್ಕೆ ವಿರುದ್ಧವಾಗಿ ಆಚರಿಸಲಿಕ್ಕೆ ಹತ್ತಿದರೆಂದು ಅನೇಕ ಉದಾಹರಣೆಗಳ ಪೂರ್ವಕ ಸ್ಪಷ್ಟವಾಗಿ ಉಲ್ಲೇಖಮಾಡಿದ್ದಾರೆ. ಪಂಡಿತರ ಈ ವೈದಿಕಸಿದ್ಧಾಂತಾಭಿಪ್ರಾಯವು ಅಕ್ಷರಶಃ ನಿಜವಿರುತ್ತದೆಂದು ನಿರಭಿಮಾನಿಗಳಾದ ಎಷ್ಟೋ ಜನರು ಕೈಯೆತ್ತಿ ಸಾರುತ್ತಿರುವರು. ಹೀಗಿದ್ದರೂ ಯಥಾರ್ಥಶಾಸ್ತ್ರಪದ್ಧತಿಯನ್ನನುಲಕ್ಷಿಸಿ ಅದರಂತೆ ವರ್ತಿಸದೆ ಕೆಲವು ದುರಭಿಮಾನಿಗಳು ವೈದಿಕತತ್ತ್ವವನ್ನು ಮೀರಿ ಅವೈದಿಕತಾಪೂರ್ವಕವಾಗಿ ಜನರಿಗೆ ದುರುಪದೇಶವನ್ನು ಮಾಡಲಿಕ್ಕೆ ಯತ್ನಿಸಹತ್ತಿದ್ದಾರೆ. ಇವರು ಇಲ್ಲಿಯವರೆಗಿದ್ದ ತಮ್ಮ ಗೌರವವು ಇನ್ನುಮೇಲೆ ವ್ಯರ್ಥವಾಗಿ ಕಳೆದುಹೋಗುವುದಲ್ಲ, ಎಂಬಾಲೋಚನೆಯಲ್ಲಿ ತಮ್ಮ ಜಡಬುದ್ಧಿಯನ್ನು ಮುಳುಗಿಸಿ, ಶಾಸ್ತ್ರದೋಷಕ್ಕೆ ಹೆದರದೆ, ಮನಸ್ಸಿಗೆ ಬಂದಂತೆ ಆಲಪಿಸಲಿಕ್ಕೆ ಹತ್ತಿರುತ್ತಾರೆ. ಪಂಡಿತರ ಪ್ರಬಂಧದಮೇಲೆ ಯಾರೋ ಒಬ್ಬ ಶಾಸ್ತ್ರಿಗಳು ಖಂಡನವನ್ನು ಬರೆದಿರುತ್ತಾರೆ. ಇವರು ಖಂಡನವೆಂದು ಇಟ್ಟ ಹೆಸರು "ದೂರಸ್ಥಾಃ ಪರ್ವತೋ ರಮ್ಯಃ" ಎಂಬ ನೀತಿಗೆ ಸರಿಯಾಗಿರುತ್ತದೆ ಪಂಡಿತರ ಪ್ರಬಂಧದ ಅಭಿಪ್ರಾಯಕ್ಕೂ, ಇವರ ನಾಮಮಾತ್ರ ಖಂಡಸಾಭಿಪ್ರಾಯಕ್ಕೂ, "ಪೃಷ್ಠತಾಡನೇ ದಂತಭಂಗ" ಎಂಬ ವಚನದಂತೆ ಸಂಬಂಧವಿರುತ್ತದೆ. ಇವರು ತಾವು ಬರೆದಿರುವ ಆರು ಪತ್ರಗಳಿಗೆ "ಖಂಡನ"ವೆಂದು ಹೆಸರಿಟ್ಟಿರುವುದು ಇವರ ಅಜ್ಞಾನವನ್ನೇ ಹೊರಗೆಡುವುತ್ತದೆ. ಮಹಾಶಯರೇ! ಸನ್ಯಾಸಾಶ್ರಮವಿಮರ್ಶದ ಖಂಡನವಾಗಬೇಕಾದರೆ ಆರು ಪತ್ರಗಳೇಕೆ? ಆರುಕೋಟಿ ಪತ್ರಗಳಾದರೂ ಸಾಲವು! ಹಾಗೂ ನೀವೊಬ್ಬರೇಕೆ? ನಿಮ್ಮಂಥವರು ಕೋಟಜನರಾದರೂ ಸಾಲರು! ಹೀಗಿದ್ದು ಆರು ಪತ್ರಗಳಿಗೆ ಖಂಡನವೆಂದು ಹೆಸರನ್ನಿಡಬೇಕಾದರೆ

ಭಯವಾದರೂ ಬರಲಿಲ್ಲವೇ? ಖಂಡನವನ್ನು ಮಾಡಬೇಕಾದರೆ ಪ್ರತಿವಾಕ್ಯವನ್ನೂ ಪ್ರತಿಪದವನ್ನೂ ಹಿಡಿಹಿಡಿದು ಸರಿಯಾಗಿ ಖಂಡಿಸಬೇಕು. ಅಂದರೆ ಅದು ಖಂಡನವೆನಿಸಿಕೊಳ್ಳುತ್ತದೆ. ಆದರಲ್ಲಿರತಕ್ಕ ಒಂದು ವಾಕ್ಯವನ್ನಾದರೂ ಎತ್ತಿಕೊಂಡು ಉತ್ತಮರೀತಿಯಿಂದ ಖಂಡಿಸಿರುವಿರೋ? ಇವರ ಮೇಲಿಂದ ಮಹಾಪಂಡಿತರಾದ ನಿಮ್ಮ ದೃಷ್ಟಿಗೆ ಯಾವ ಖಂಡನಗ್ರಂಥಗಳೂ ಬಿದ್ದಿಲ್ಲವೆಂದು ಸ್ಪಷ್ಟವಾಗಿ ತೋರುತ್ತದೆ. ಶಾಸ್ತ್ರಿಗಳೇ! ಹೀಗಿದ್ದು, ಸನ್ಯಾಸಾಶ್ರಮವಿಮರ್ಶದ ಖಂಡನವನ್ನು ಯಾರೂ ಬರೆಯಲಿಲ್ಲ; ನಾನೊಬ್ಬನೇ ಬರೆದೆನೆಂದು ಈ ತರಹದ ದೊಡ್ಡಹೆಸರನ್ನಿಟ್ಟುಕೊಂಡು ಮಹಾಕೀರ್ತಿಶಾಲಿಗಳಾಗುವುದಕ್ಕೋಸ್ಕರ ಯತ್ನಿಸಿದ್ದೀರಲ್ಲವೇ? ಅಂದಮೇಲೆ ನಿಮ್ಮ ಬುದ್ಧಿಗೆ ಬೆಲೆಯನ್ನು ಕಟ್ಟುವರಾರು? ಈ ಶಾಸ್ತ್ರಿಗಳಿಗೆ ಅಷ್ಟಾವರ್ಣಾಂತರ್ಗತ ಜಂಗಮರು ಯಾರು ಎಂಬ ವಿಷಯದ ಗಂಧವೇ ಸೋಂಕಿಲ್ಲವೆಂದು ಇವರ ಬರವಣಿಗೆಯ ಮೇಲಿಂದಲೇ ತಿಳಿದುಬರುತ್ತದೆ. ಇವರು ಸ್ವಮತಗ್ರಂಥಗಳನ್ನು ಮನಸ್ಸಿನಿಂದಂತೂ ನೋಡೇ ಇಲ್ಲ, ಕಣ್ಣುಗಳಿಂದ ಅರ್ಧಾರ್ಧ ನೋಡಿದ್ದಾರೋ ಇಲ್ಲವೋ ಅದನ್ನೂ ಕೂಡ ನಿಶ್ಚಯವಾಗಿ ಹೇಳಲಿಕ್ಕೆ ಬರುವಂತಿಲ್ಲ. ಐತಿಹಾಸಿಕದೃಷ್ಟಿಯಂತೂ ಈ ಮಹಾಶಯರನ್ನು ಬಿಟ್ಟು ದೂರೇ ಓಡಿಹೋಗಿರುತ್ತದೆ. ಈ ಬುದ್ಧಿಮಂತರು ತಮ್ಮ ಬುದ್ಧಿಯ ಪ್ರಭಾವದಿಂದ ಬರೆದ ಖಂಡನವು ನಾಮಮಾತ್ರವಾದರೂ ಅದನ್ನು ಮೊದಲು ಪಂಡಿತರಿಗೆ ಕಳುಹಿಸಿಕೊಡತಕ್ಕದ್ದಿತ್ತು. ಇಂದಿನ ವರೆಗೂ ಇವರ ಲಘುತರವಾದ ಪುಸ್ತಕವನ್ನೇ ನೋಡಿದ್ದಿಲ್ಲ. ತಾ|| ೨೪-೬-೧೯೯೧ ರಲ್ಲಿ ಕನ್ನಡದಿಂದ ಬರೆದ ಪುಸ್ತಕವು ಬೇರೊಬ್ಬರ ಕಡೆಯಿಂದ ಬಂದಿತು. ಸಂಸ್ಕೃತ ಭಾಷೆಯಿಂದ ಬರೆದದ್ದು ಇನ್ನೂವರೆಗೂ ಬಂದಿಲ್ಲ. ಈ ಪ್ರಕಾರವಾಗಿ ತಂತ್ರವನ್ನು ಮಾಡಿರುವುದು ಇವರ ಉತ್ತಮಪಾಂಡಿತ್ಯವನ್ನೇ ಹೊರಗೆಡಹುವುತ್ತದೆ.

ಈ ಮಹಾಶಯರು ಸಂಸ್ಕೃತದಿಂದ ಬರೆದದ್ದನ್ನು ಆದಷ್ಟು ಶೀಘ್ರವಾಗಿ ಕಳುಹಿಸಿಕೊಡಬೇಕು. ಸ್ವತಃ ಪಂಡಿತರಿಂದ ಅದರ ನಿರಸನವು ಪುನಃ ಸಂಸ್ಕೃತ ಭಾಷೆಯಲ್ಲಿಯೇ ಮಾಡಲ್ಪಡುವುದು. ಖಂಡನ ಮಂಡನಗಳು ಶೀಘ್ರವಾಗಿ ನೆರವೇರಬೇಕು. ಅಂದರೆ ಆನಂದವು! ಈ ಸಂಗತಿಯನ್ನು ಅಗಾಧಪಾಂಡಿತ್ಯವುಳ್ಳ ಶಾಸ್ತ್ರಿಮಹಾಶಯರು ಪೂರ್ಣವಾಗಿ ಲಕ್ಷ್ಯದಲ್ಲಿಡ ತಕ್ಕದ್ದು. ಸದ್ಯಃ ಈ ಲೇಖಕಮಹಾಶಯರ ಹಾಗೂ ಇವರ ಅನುಯಾಯಿಗಳ ಮೋಹಪಿಶಾಚೋಚ್ಚಾಟನವನ್ನು ಮಾಡುವುದಕ್ಕೋಸ್ಕರ ನಾನು ಈ ಪುಸ್ತಕವನ್ನು ಬರೆದಿರುತ್ತೇನೆ. ಗುಣಗ್ರಾಹಿಗಳಾದ ಜನರು ಮುಂದೆ ಪ್ರತಿಪಾದಿಸಲ್ಪಡುವ ಜಂಗಮ ವಿಷಯವನ್ನು ಸಂಪೂರ್ಣವಾಗಿ ವಿಚಾರಮಾಡಿಕೊಂಡು ಅದರಂತೆ ವರ್ತಿಸಬೇಕೆಂದು ಕೋರಿಕೆ.

ತಾ|| ೧-೭-೧೯೧೯.

ಬಿ. ಗುರುಸಿದ್ಧಶಾಸ್ತ್ರೀ



ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು

ಶ್ರೀಮಜ್ಜಗದ್ಗುರು ಪಂಚಾಚಾರ್ಯಾ ವಿಜಯಂತೇತರಾಮ್.

# ಸನ್ಯಾಸಾಶ್ರಮವಿಮರ್ಶ

# ತತ್ತ್ವಸ್ಥಿರೀಕರಣ.

ಭಾಷ್ಯರೂಪೇಣ ಸಿದ್ಧಾಂತಂ ನಿಗಮಾಗಮಸಂಮತಂ |
ವಿಲಿಖ್ಯ ಕೃಪಯಾಂಚಕ್ರುರ್ಯೇ ತಾನ್ ವಂದೇ ಜಗದ್ಗುರೂನ್ ||
ಗುರುದ್ರೋಹಿತಮಃಸೂರ್ಯಃ ಸಾಧುವರ್ಯಃ ಸುಧೀಃ ಸದಾ |
ಲೋಕೇ ವಿಜಯತಾಂ ಶ್ರೀಮಾನ್ ಕಾಶೀನಾಥಬುಧೋ ಮುದಾ ||

"ಯದಾತಮಸ್ತನ್ನ ದಿವಾನರಾತ್ರಿರ್ನ ಸನ್ನಚಾಸಚ್ಛಿವ ಏವ ಕೇವಲಃ" "ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕ ಈಶಾನೋ ಭೂತಭವ್ಯಸ್ಯ" ಇತ್ಯಾದಿಶ್ರುತಿವಾಕ್ಯಗಳ ಅಭಿಪ್ರಾಯವಿರ್ಪಂತೆ ಪರಶಿವನು ತೇಜೋಮಯನಾಗಿ ಆಕಾಶಮಧ್ಯದಲ್ಲಿ ಪ್ರಕಾಶಿಸುತ್ತಿರಲು, ಲೀಲೆಯಿಂದ ಸಾಕಾರರೂಪವನ್ನು ಧರಿಸಿ—

"ಇಹಖಲು ಪರಮಕಾರುಣಿಕೋ ವಿರಾಡ್ರೂಪಃ ಪರಂಜ್ಯೋತಿರ್ನಿರ್ವಿಕಾರೋ ನಿರಾಕಾರಃ ಪರಶಿವಃ ಸ್ವಾಂಶಭೂತಾನ್ ಬ್ರಹ್ಮವಿಷ್ಣುಮಹೇಶ್ವರಾನ್ ಸಮ್ಯಗುತ್ಪಾದ್ಯ ತತ್ರ ಪರಮಾಪ್ತತಮಂ ಸದಾಶಿವಮಾಕಾರ್ಯ ತಂಪ್ರತೀತ್ಥಮುಪಾದಿಶತ್"

ಈ ಪ್ರಕಾರವಾಗಿ ಪೂರ್ವಾಚಾರ್ಯರ ಮಂಗಲೋಕ್ತಿಗಳಂತೆ ಸೃಷ್ಟಿಯನ್ನು ನಿರ್ಮಿಸಿ, ಮುಂದಿನ ಮಹಾವಾಕ್ಯಗಳ ಅಭಿಪ್ರಾಯದಂತೆ ಕ್ರಮವನ್ನು ತೋರಿಸಿರುತ್ತಾನೆ.

"ಪದಾರ್ಥೋ ದ್ವಿವಿಧಃ ಸ್ವತಂತ್ರೋಽಸ್ವತಂತ್ರಶ್ಚೇತಿ ; ತತ್ರ ಸ್ವತಂತ್ರೋಹ್ಯಹಮೇವ । ಅಸ್ವತಂತ್ರಶ್ಚೇತನೋಽಚೇತನ ಇತಿ ದ್ವಿವಿಧಃ । ತತ್ರ ವೀರನಂದ್ಯಾದಯಸ್ತಥೈಕಾಕ್ಷರಾದಯಃ ಪ್ರಮಥ ಗಣಾಂತಾಶ್ಚೇತನಾ ನಿತ್ಯಮುಕ್ತಾಶ್ಚ । ನಿತ್ಯಸಂಸಾರಿಣಸ್ತು ಸೃಷ್ಟಿ ಸ್ಥಿತ್ಯಂತಕರ್ತಾರೋ ಬ್ರಹ್ಮವಿಷ್ಣುಮಹೇಶ್ವರಾದಯೋ ಮನುಷ್ಯಾಂತಾಃ । ತಾನ್ ಸರ್ವಾನ್ ಮನ್ಮುಖೋದ್ಭೂತಾಷ್ಟಾವಿಂಶತ್ಯಾಗಮೇಷ್ವ ಸುರಮೋಹಕವೇದವಿರುದ್ಧಾನ್ ದಶೋಪಾಗಮಾನ್ ವಿಹಾಯ ಸಕಲ ವೇದಾರ್ಥನಿರ್ಣಾಯಕಾಷ್ಟಾದಶ ಸದಾಗಮೋಕ್ತಪ್ರಕಾರೇಣ ಮಮ ಸದ್ಯೋಜಾತಾದಿ ಪಂಚಮುಖೋದ್ಭೂತೈಃ ಕೃತಯುಗೇ ಏಕಾಕ್ಷರ ದ್ವ್ಯಕ್ಷರತ್ರ್ಯಕ್ಷರ ಚತುರಕ್ಷರ ಪಂಚಾಕ್ಷರನಾಮಸಮೇತೈಃ ಪಂಚಾ ಚಾರ್ಯೈರ್ಬ್ರಹ್ಮಾದಿಸರ್ವದೇವತಾಗಣಾನ್ನೀಲಮಯಲಿಂಗಂ ಧಾರಯಿತ್ವಾ ಪಂಚಾಕ್ಷರೀಮಂತ್ರಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯ। ತ್ರೇತಾಯಾಮೇಕವಕ್ತ್ರ ದ್ವಿವಕ್ತ್ರ ತ್ರಿವಕ್ತ್ರ ಚತುರ್ವಕ್ತ್ರ ಪಂಚವಕ್ತ್ರೇತಿ ನಾಮಸಮೇತೈಸ್ತೈರೇವ ಪಂಚಾಚಾರ್ಯೈಃ ಕೌಶಿಕ ಕಶ್ಯಪ ವಶಿಷ್ಠಾದೀನೃಷಿಗಣಾನ್ ಸರ್ವಾನ್ ಮನುಷ್ಯಾನ್ ಯಕ್ಷಗಂಧರ್ವಕಿನ್ನರಾನಪಿ ಸರ್ವಾನ್ ರತ್ನಮಯಲಿಂಗಂ ಧಾರಯಿತ್ವಾ ಪಂಚಾಕ್ಷರೀಮಂತ್ರ ಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯ । ದ್ವಾಪರೇ ರೇಣುಕ ದಾರುಕ ಘಂಟಾಕರ್ಣ ಧೇನುಕರ್ಣ ವಿಶ್ವಕರ್ಣೇತಿ ನಾಮಸಮೇತೈಸ್ತೈರೇವ ಪಂಚಾಚಾರ್ಯೈಃ ಷೋಡಶಮಹಾರಾಜಾನ್ ಹರಿಶ್ಚಂದ್ರನಲ ಕಕುತ್ಸಪುರೂರವಾದೀಂಸ್ತಥೈವ ರಾಕ್ಷಸಗಣಾನ್ ಸರ್ವಾನಪಿ ವಜ್ರ ಮಯಲಿಂಗಂ ಧಾರಯಿತ್ವಾ ಪಂಚಾಕ್ಷರಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯ । ಕಲಿಯುಗೇ ರೇವಣಾರಾಧ್ಯ ಮರುಲಾರಾಧ್ಯೈಕೋ ರಾಮಾರಾಧ್ಯ ಪಂಡಿತಾರಾಧ್ಯ ವಿಶ್ವಾರಾಧ್ಯೇತಿ ನಾಮಸಮೇತೈಸ್ತೈರೇವ ಪಂಚಾಚಾರ್ಯೈರ್ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರಪ್ರಮು

ಋಾನಷ್ಟಾದಶಜಾತೀನೇಕೋತ್ತರಶತಕುಲಜಾನ್ಮನುಷ್ಯಾನ್ ಶಿಲಾ ಮಯಲಿಂಗಂ ಧಾರಯಿತ್ವಾ ಪಂಚಾಕ್ಷರಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯೇತಿ ಸಾಕ್ಷಾತ್ಪರಂಜ್ಯೋತಿಃ ಪರಶಿವಃ ಕಾರ್ಯರುದ್ರಮುಪಾ ದಿಶತ್ ||

ಈ ಪ್ರಕಾರವಾಗಿ ಪರಶಿವೋಕ್ತಿಯಂತೆ ನಿತ್ಯಮುಕ್ತರೆನಿಸಿಕೊಂಡ ಜಗದ್ಗುರು ಪಂಚಾಚಾರ್ಯರು ನಾಲ್ಕೂ ಯುಗಗಳಲ್ಲಿ ದೇವರಾಕ್ಷಸ ಗಂಧರ್ವ ಮನುಷ್ಯವರ್ಗಕ್ಕೆ ಲಿಂಗಧಾರಣವನ್ನು ಮಾಡಿ ವೀರಶೈವ ಮತವನ್ನು ಸ್ಥಾಪನಗೊಳಿಸಿದರು. ಇಂಥ ಪರಮಪವಿತ್ರವಾದ ವೀರ ಶೈವಮತದಲ್ಲಿ ಅಷ್ಟಾವರಣ ಪಂಚಾಚಾರ ಷಟ್ಸ್ಥಲ ಮೊದಲಾದ ಮೋಕ್ಷಸಾಧನೀಭೂತಗಳಾದ ಉಪಕರಣಗಳನ್ನು ವಿರಚಿಸಿ ಈ ತತ್ತ್ವ ವನ್ನು ಪ್ರಚಾರಗೊಳಿಸಿದರು. ಪ್ರಕೃತದಲ್ಲಿ ಅಷ್ಟಾವರಣಾಂತರ್ಗತ ಜಂಗಮರು ಯಾರೆಂಬ ವಿಷಯವೇ ವಿಮರ್ಶನೀಯವಾಗಿದೆ. ಸದ್ಯಃ ಆ ವಿಷಯವನ್ನೇ ವಿಮರ್ಶಿಸೋಣ! ಅಷ್ಟಾವರಣಗಳು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷ, ಮಂತ್ರ ಗಳೆಂಬ ಹೆಸರುಗಳಿಂದ ಪ್ರಸಿದ್ಧವಿರುತ್ತವೆ. ಇವುಗಳಲ್ಲಿ ಮೂರನೆಯ ದಾದ ಜಂಗಮಪದವಾಚ್ಯರು ವಿರಕ್ತರೆಂದು ನಮ್ಮ ಶಾಸ್ತ್ರಿಮಹಾಶಯರು ತಮ್ಮ ಮನಸ್ಸಿನಲ್ಲಿ ನೆಲಗಟ್ಟಿನಂತೆ ಗಟ್ಟಿಮಾಡಿಕೊಂಡಿದ್ದಾರೆಂದು ಇವರ ಲೇಖದಿಂದಲೇ ತಿಳಿದುಬರುತ್ತದೆ. ಮಹಾಶಯರೇ! ವಿರಕ್ತರು ಶಾಸ್ತ್ರ ಸಿದ್ಧವಾಗಿ ಅಷ್ಟಾವರಣಾಂತರ್ಗತ ಜಂಗಮ ಪದವಾಚ್ಯರು ಎಂದೂ ಆಗುವುದಿಲ್ಲ. ಈ ವಿಷಯವನ್ನು ನೀವು ಸಿದ್ಧಮಾಡಬೇಕಾದರೆ ನೂರು ಜನ್ಮಗಳನ್ನು ತಿರುಗಿಬಂದರೂ ನಿಮಗೆ ದುಃಸಾಧ್ಯವೇ ಸರಿ! ನಿಮ್ಮಂತೆ ತಲೆದೂಗಿದ್ದಾದರೆ ವಿರಕ್ತಜಂಗಮತ್ವದಲ್ಲಿ ಪೂರ್ವಾಪರ ಶಾಸ್ತ್ರದೋಷ ಗಳು ಅಸಂಖ್ಯಗಳಾಗಿ ಬರುತ್ತವೆ. ಆ ಶಾಸ್ತ್ರದೋಷಗಳನ್ನು ಮುಂದೆ ವಿವರಿಸೋಣ! ಶಾಸ್ತ್ರಿಗಳೇ! ಗುರುಸ್ಥಲದವರಲ್ಲಿ ಯುಗಯುಗಾಂತರ

ಗಳಿಂದ ಚರಮೂರ್ತಿ (ಜಂಗಮಮೂರ್ತಿ)ಗಳೆಂದು ಯೋಗರೂಢಿ ಗಳಿಂದ ಪ್ರಸಿದ್ಧರಾದ ಆಚಾರ್ಯವಂಶಜರೇ ಜಂಗಮರಾಗುತ್ತಾರೆ. ಆದಕಾರಣದಿಂದಲೇ ವೀರಶೈವ ಸದಾಚಾರ ಸಂಗ್ರಹದಲ್ಲಿ,

ಇತಃಪರಂ ಪ್ರವಕ್ಷ್ಯಾಮಿ ವ್ಯವಸ್ಥಾಂ ಪುತ್ರವರ್ಗಿಣಾಂ ।
ಗುರುಸ್ಥಲಸಮಾಖ್ಯಾತಾ ವೀರಮಾಹೇಶ್ವರಾಭಿಧಾಃ ॥
ಏತೇ ಗುರುಪದಾಧ್ಯಕ್ಷಾ ನಾನ್ಯೇ ಲಾಂಛನಧಾರಿಣಃ ।
ಅತಃ ಸ್ವವಂಶಜಾನ್ ಬಾಲಾನ್ ಗೃಹೀತ್ವಾ ತಾನ್ ವರಾನನೇ ॥
ವೀರಮಾಹೇಶ್ವರೀಂ ದೀಕ್ಷಾಂ ಕೃತ್ವಾ ತೇ ಪುತ್ರವರ್ಗಿಣಃ ।
ಪಟ್ಟಾಭಿಷೇಕಯುಕ್ತಾಂಶ್ಚ ಶಂಖಮುದ್ರಾನ್ವಿತಾನ್ ಭುವಿ ॥
ಷಟ್ಸ್ಥಲಜ್ಞಾನಸಂಪನ್ನಾನ್ ಕುರ್ವಂತಿ ಚರಸಂಜ್ಞಕಾನ್ ॥

ಈ ಪ್ರಕಾರವಾಗಿ ಷಟ್ಸ್ಥಲಜ್ಞಾನಿಗಳಾದ ಗುರುಸ್ಥಲದವರೇ ಜಂಗಮರಾಗುತ್ತಾರೆಂದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುತ್ತದೆ. ಈ ಮಹಾನುಭಾವರ ವರ್ಣನವೇ—

ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ ।
ಪಶುಭ್ಯೋಽಪಿ ನರಾಃ ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ ॥
ದ್ವಿಜಾತಿಷ್ವಧಿಕಾ ವಿಪ್ರಾ ವಿಪ್ರೇಷು ಕ್ರತುಬುದ್ಧಯಃ ।
ಕ್ರತುಬುದ್ಧಿಷು ಕರ್ತಾರಸ್ತೇಭ್ಯಃ ಸನ್ಯಾಸಿನೋಽಧಿಕಾಃ ॥
ತೇಭ್ಯೋ ವಿಜ್ಞಾನಿನಃ ಶ್ರೇಷ್ಠಾಸ್ತೇಷು ಶಂಕರಪೂಜಕಾಃ ।
ತೇಷು ಶ್ರೇಷ್ಠಾ ಮಹಾಭಾಗ ಮಮ ಲಿಂಗಾಂಗಸಂಗಿನಃ ॥
ಲಿಂಗಾಂಗಸಂಗಿಷ್ವಧಿಕಃ ಷಟ್ಸ್ಥಲಜ್ಞಾನವಾನ್ ಪುಮಾನ್ ।
ತಸ್ಮಾದಪ್ಯಧಿಕೋ ನಾಸ್ತಿ ತ್ರಿಷು ಲೋಕೇಷು ಸರ್ವದಾ ॥
ಸ ವಂದ್ಯಃ ಸರ್ವದಾ ಪೂಜ್ಯಃ ಸಂಸಾರವಿಜಿಗೀಷುಭಿಃ ।
ಬಹುನೋಕ್ತೇನ ಕಿಂ ವತ್ಸ ಸ ಏವಾಹಂ ನಸಂಶಯಃ ॥

ಈ ಶಂಕರಸಂಹಿತಾ ಶ್ಲೋಕಗಳಲ್ಲಿ ಅಡಕವಾಗಿರುತ್ತದೆ. ಯಾವನು ಷಟ್ಸ್ಥಲಜ್ಞಾನಿಯಾಗುವನೋ ಆ ಆಚಾರ್ಯಕುಲೋತ್ಪನ್ನನು ಜಗನ್ಮಾನ್ಯನಾಗುವನು. ಈ ಯಥಾರ್ಥ ತತ್ತ್ವವನ್ನು ತಿಳಿಯದೆ ಕೇವಲ ವಿರಕ್ತರಲ್ಲಿಯೇ ಇದರ ಯೋಜನೆಯನ್ನು ಮಾಡಿದ್ದನ್ನು ನೋಡಿದರೆ ಇವರು ಎಷ್ಟು ಶಾಸ್ತ್ರಾರ್ಥಧರಿರಬಹುದೆಂಬುದು ಪ್ರತಿಯೊಬ್ಬರಿಗೂ ತಿಳಿಯುವಂತಿದೆ. ಸಿದ್ಧಾಂತಶಿಖಾಮಣಿಯ ಗುರುಕಾರುಣ್ಯಸ್ಥಲದಲ್ಲಿ, ಶಿಷ್ಯನು ಮೋಕ್ಷಮೂಲಭೂತವಾದ ದೀಕ್ಷೆಯನ್ನು ಪಡೆದುಕೊಳ್ಳಬೇಕಾದರೆ—

**ಲಿಂಗಾಂಗಯೋಗತತ್ತ್ವಜ್ಞಂ ನಿರೂಢಾದ್ವೈತವಾಸನಂ ।**
**ಲಿಂಗಾಂಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಂ ॥**

ಲಿಂಗಾಂಗಸ್ಥಲಜ್ಞಾನಿಯಾದ ಗುರುವನ್ನೇ ಆಶ್ರಯಿಸಬೇಕೆಂದು ಸಾಕ್ಷಾಜ್ಜಗದ್ಗುರು ರೇಣುಕಾಚಾರ್ಯರೇ ಅಪ್ಪಣೆಯನ್ನು ಕೊಡಿಸಿದ್ದಾರೆ. ಅಂದಮೇಲೆ ದೀಕ್ಷಾಗುರುಗಳಲ್ಲಿ ಷಟ್ಸ್ಥಲಜ್ಞಾನವು ಸ್ವಭಾವಸಿದ್ಧವಾಗಿ ಇದ್ದಂತಾಗಲಿಲ್ಲವೇ? ಹೀಗಿದ್ದರೂ ಈ ನಮ್ಮ ಶಾಸ್ತ್ರಿ ಮಹಾಶಯರು ಷಟ್ಸ್ಥಲಗಳು ವಿರಕ್ತರಿಗೆ ಮಾತ್ರವಲ್ಲದೆ ಬೇರೊಬ್ಬರಿಗೆ ಇರುವುದಿಲ್ಲವೆಂದು ಧರ್ಮದರ್ಶನಜ್ಞಾನಶೂನ್ಯರ ಮಾತನ್ನು ಕೇಳಿ ಹೀಗೆ ಬರೆದಂತೆ ಕಾಣುತ್ತದೆ. ಯಾಕಂದರೆ—ಕೆಲವು ಅಜ್ಞಾನಿ ವಿರಕ್ತರು ಷಟ್ಸ್ಥಲಗಳನ್ನು ಚನ್ನಬಸವಣ್ಣನು ಸ್ಥಾಪನಮಾಡಿದನೆಂದು ಹಿಂದೆಯೂ ಮುಂದೆಯೂ ವಿಚಾರಮಾಡದೆ ಆಡುತ್ತಾರೆ. ಇವರ ಅಭಿಪ್ರಾಯದಂತೆಯೇ ಹೋದದ್ದಾದರೆ, ಚನ್ನಬಸವನಿಗಿಂತಲೂ ಪೂರ್ವದಲ್ಲಿ ಷಟ್ಸ್ಥಲಗಳು ಇದ್ದಿಲ್ಲವೆನ್ನಬೇಕಾಗುತ್ತದಲ್ಲವೇ? ಅರ್ಥಾತ್ ಷಟ್ಸ್ಥಲಗಳು ಹುಟ್ಟಿ ಇಂದಿಗೆ ೭೫೦ ವರ್ಷಗಳೇ ಆದವೆಂದು ಸಿದ್ಧಾಂತವಾಗುವುದು. ಯಾಕಂದರೆ—ಚನ್ನಬಸವನು ಹನ್ನೆರಡನೆಯ ಶತಮಾನದಲ್ಲಿದ್ದನಷ್ಟೇ! ಇರಲಿ; ಆದರೆ ಶ್ರೀ ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗೆ ಷಟ್ಸ್ಥಲಸಿದ್ಧಾಂತವನ್ನು ಬೋಧಿಸಿದ ಬಗ್ಗೆ

ಸಿದ್ಧಾಂತಶಿಖಾಮಣಿಯೆಂಬ ವೀರಶೈವರಿಗೆ ರತ್ನಪ್ರಾಯವಾದ ಗ್ರಂಥವು ಜಗತ್ತಿನಲ್ಲಿ ಇಂದಿನವರೆಗೂ ಸಿಂಹಗರ್ಜನದಂತೆ ಗರ್ಜಿಸುತ್ತಿರಲು, ಈ ಮಹಾನಾದವು ಧರ್ಮಶಾಸ್ತ್ರಬಧಿರರಾದ ಈ ಶಾಸ್ತ್ರಿಗಳ ಮತ್ತು ಇವರ ಅನುಯಾಯಿಗಳ ಕರ್ಣಕುಹರದಲ್ಲಿ ಪ್ರವೇಶಿಸಿದಂತೆ ತೋರುವುದಿಲ್ಲ. ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ ಷಟ್ಸ್ಥಲಸಿದ್ಧಾಂತವನ್ನು ಈಗ್ಗೆ ಸುಮಾರು ೩೩೦೦ ವರ್ಷಗಳ ಪೂರ್ವದಲ್ಲಿ ಉಪದೇಶಮಾಡಿದರೆಂದೂ, ಸಿದ್ಧಾಂತಶಿಖಾಮಣಿ ಕರ್ತೃಗಳಾದ ಶ್ರೀ ಶಿವಯೋಗಿಶಿವಾಚಾರ್ಯರು ೬ ನೆಯ ಶತಮಾನದಲ್ಲಿದ್ದರೆಂದೂ, ಪಂಡಿತ ಶ್ರೀ ಕಾವ್ಯತೀರ್ಥ ಕಾಶೀನಾಥಶಾಸ್ತ್ರಿಗಳವರು ತಮ್ಮಿಂದ ಬರೆಯಲ್ಪಟ್ಟ 'ರೇಣುಕ ಚರಿತ್ರ' ವೆಂಬ ಗ್ರಂಥದಲ್ಲಿ ಐತಿಹಾಸಿಕ ದೃಷ್ಟಿಯಿಂದ ಅನೇಕಾಧಾರಗಳ ಮೂಲಕ ಸಿದ್ಧಮಾಡಿದ್ದಾರೆ. ಹೀಗಿದ್ದು ಚನ್ನಬಸವನೇ ಸ್ಥಾಪನಮಾಡಿದನೆಂದು ಹೇಳುವುದು ಅತ್ಯಂತ ಮೂರ್ಖತನವು. ಒಂದು ಪಕ್ಷದಲ್ಲಿ ಚನ್ನಬಸವನಿಗಿಂತಲೂ ಪೂರ್ವದಲ್ಲಿ ಷಟ್ಸ್ಥಲಗಳನ್ನು ವಿರಕ್ತರೇ ಸ್ಥಾಪನಮಾಡಿದ್ದಾರೆಂದು ಯಾರಾದರೂ ಅಲ್ಪಮತಿಗಳು ನುಡಿಯುಬಹುದು ; ಹಾಗಾದರೆ, ಸ್ಥಾಪನಮಾಡಿದವನ ಹೆಸರೇನು ? ಅವನ ಸಿದ್ಧಾಂತಗ್ರಂಥದ ನಾಮವೇನು ? ಅವನು ಎಷ್ಟನೆಯ ಶತಮಾನದಲ್ಲಿದ್ದನು ? ಹಾಗೂ ಅವನ ಗ್ರಂಥದ ಪ್ರಮಾಣಗಳನ್ನು ಯಾವ ಯಾವ ಪ್ರಾಚೀನ ಗ್ರಂಥಕಾರರು ತಮ್ಮ ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ ? ಎಂಬ ಪ್ರಶ್ನೆಗಳಿಗೆ ಅವರು ಸರಿಯಾದ ಉತ್ತರವನ್ನು ಹೇಳಬಲ್ಲರೋ ? ಇರಲಿ, ಮತ್ತೊಂದು ಪಕ್ಷವೇನೆಂದರೆ—

ಚನ್ನಬಸವನೇ ಆಗಲಿ ಅಥವಾ ಅವನ ಆಶ್ರಮದ ಪ್ರಾಚೀನಾರ್ವಾಚೀನರೇ ಆಗಲಿ ಇವರೇ ಷಟ್ಸ್ಥಲಗಳನ್ನು ಸ್ಥಾಪಿಸಿದ್ದಾರೆಂಬ ಮೂಢಾಭಿಪ್ರಾಯವನ್ನು ಗಟ್ಟಿಯಾಗಿ ಹಿಡಿದುಕೊಂಡಲ್ಲಿ ವೀರಶೈವ

ಮತವು ಬೇರೆ, ಹಾಗೂ ಷಟ್ಸ್ಥಲಗಳು ಬೇರೆ ಎಂದು ಸ್ಪಷ್ಟವಾಗಿ ಒಡೆದುಕಾಣುವುದಿಲ್ಲವೇ ? ಯಾಕೆಂದರೆ—ವೀರಶೈವಮತಸ್ಥಾಪಕರು ಶ್ರೀಮತ್ಪಂಚಾಚಾರ್ಯರೆಂದು ಸರ್ವರೂ ಹೇಳುತ್ತಾರೆ. ಅಂದಮೇಲೆ ಅವರು ಸ್ಥಾಪನಮಾಡಿದ ವೀರಶೈವಮತದಲ್ಲಿ ಅಷ್ಟಾವರಣ, ಪಂಚಾಚಾರ ಮೊದಲಾದವುಗಳಂತೆ ಷಟ್ಸ್ಥಲಗಳು ಬರಲಿಲ್ಲವೇ ? ಹೀಗಿದ್ದು ವೀರಶೈವ ಮತಸ್ಥಾಪನಾಚಾರ್ಯರು ಬೇರೆ; ಷಟ್ಸ್ಥಲ ಸ್ಥಾಪನಾಚಾರ್ಯರು ಬೇರೆ ಎಂದು ಅಂದದ್ದಾದರೆ ಇದು ಎಷ್ಟು ಧರ್ಮಶಾಸ್ತ್ರವಿರುದ್ಧವಾದ ಸಂಗತಿಯು ನೋಡಿರಿ ? ಹೀಗಾದಮೇಲೆ ಅಷ್ಟಾವರಣ ಸ್ಥಾಪನಾಚಾರ್ಯರು ಬೇರೆ; ಹಾಗೂ ಪಂಚಾಚಾರ ಸ್ಥಾಪನಾಚಾರ್ಯರು ಬೇರೆ ಎಂದು ಈ ಮತದಲ್ಲಿ ನಾನಾಚಾರ್ಯತ್ವವನ್ನು ಕಲ್ಪಿಸಬೇಕಾದೀತು. ಹಿಂದೆಯೂ ಮುಂದೆಯೂ ವಿಚಾರಮಾಡಿ ನೋಡದೆ ದೂರದೃಷ್ಟಿಶೂನ್ಯರಾಗಿ ಹೀಗೆ ಬೊಬ್ಬೆಯನ್ನೆಬ್ಬಿಸಿದ ಕಾರಣದಿಂದಲೇ ಈ ಮತವು ಇತ್ತೀಚಿನದೆಂದು ಮತಾಂತರದವರೂ, ತನ್ಮೂಲಕ ಗವರ್ನಮೆಂಟಿನವರೂ ಅನ್ನಲಿಕ್ಕೆ ಹತ್ತಿದರು. ಕೂಪಮಂಡೂಕದಂತಿರುವ ಮಹಾಶಯರೇ ಹಾಗೂ ತದನುಯಾಯಿಗಳೇ ! ಈ ಮತದ ಐತಿಹ್ಯವನ್ನು ತಿಳಿಯದೆ ದುರಭಿಮಾನದಿಂದ ಮನಸ್ಸಿಗೆ ಬಂದಂತೆ ನುಡಿಯುತ್ತ ಹೋಗುವುದು ಎಷ್ಟು ಭೂಷಣವಲ್ಲ! ಆದಕಾರಣ ಈ ಶಾಸ್ತ್ರತತ್ವವನ್ನು ತಿಳಿದು, ವಿರಕ್ತರೇ ಷಟ್ಸ್ಥಲಬ್ರಹ್ಮಿಗಳೆಂದು ಬಡೆದುಕೊಂಡಿರುವ ಭ್ರಾಂತಿಭೂತದಿಂದ ಮುಕ್ತರಾಗಿ ಶಾಸ್ತ್ರಮಾರ್ಗದಂತೆ ವರ್ತಿಸಿರಿ. ಅಂದರೆ ಭೂಷಣವು. ಸುಪ್ರಬೋಧಾಗಮದಲ್ಲಿ—

ಶ್ರೀ ಜಗದ್ಗುರು ರೇಣುಕಾಚಾರ್ಯರ ವರ್ಣನದಲ್ಲಿ—

ಪೂರ್ವದಿಕ್ಕುಲಶಾಧೀಶಃ ಶಿವಲಾಂಛನಧಾರಕಃ ।
ದ್ವಾದಶಾನಾಂ ಸಹಸ್ರಾಣಾಂ ಚರಲಿಂಗಾಧಿಪೋ ಭವೇತ್ ॥

ಶ್ರೀ ಜಗದ್ಗುರು ಮರುಳಾರಾಧ್ಯರ ವರ್ಣನದಲ್ಲಿ—

ದಕ್ಷಿಣಕಲಶಾಧೀಶಃ ಶಿವಲಾಂಛನಧಾರಕಃ ।
ಷಟ್ಸಹಸ್ರೇತಿಸಂಖ್ಯಾಕಚರಲಿಂಗಾಧಿಪೋ ಭವೇತ್ ॥

ಶ್ರೀ ಜಗದ್ಗುರು ಏಕೋರಾಮಾರಾಧ್ಯರ ವರ್ಣನದಲ್ಲಿ—

ಪಶ್ಚಿಮಕಲಶಾಧೀಶಃ ಶಿವಲಾಂಛನಧಾರಕಃ ।
ತ್ರಿಸಹಸ್ರೇತಿಸಂಖ್ಯಾಕಚರಲಿಂಗಾಧಿಪೋ ಭವೇತ್ ॥

ಶ್ರೀ ಜಗದ್ಗುರು ಪಂಡಿತಾರಾಧ್ಯರ ವರ್ಣನದಲ್ಲಿ—

ಉತ್ತರಕಲಶಾಧೀಶಃ ಶಿವಲಾಂಛನಧಾರಕಃ ।
ಅಸಂಖ್ಯಾತೇತಿಸಂಖ್ಯಾಕಚರಲಿಂಗಾಧಿಪೋ ಭವೇತ್ ॥

ಹಾಗೂ ವೀರಶೈವ ದೀಕ್ಷಾವಿಧಿಯಲ್ಲಿ ಶ್ರೀ ಜಗದ್ಗುರು ರೇವಣಾರಾಧ್ಯರಿಗೆ 'ದ್ವಾದಶ ಸಹಸ್ರಚರಲಿಂಗಾಧ್ಯಕ್ಷ' ಎಂಬ ವಿಶೇಷಣವೂ, ಶ್ರೀ ಜಗದ್ಗುರು ಮರುಳಾರಾಧ್ಯರಿಗೆ 'ಷಟ್ಸಹಸ್ರಚರಲಿಂಗಾಧ್ಯಕ್ಷ' ಎಂಬ ವಿಶೇಷಣವೂ, ಶ್ರೀ ಜಗದ್ಗುರು ಏಕೋರಾಮಾರಾಧ್ಯರಿಗೆ 'ತ್ರಿಸಹಸ್ರಚರಲಿಂಗಾಧ್ಯಕ್ಷ' ಎಂಬ ವಿಶೇಷಣವೂ ಹಾಗೂ ಶ್ರೀ ಜಗದ್ಗುರು ಪಂಡಿತಾರಾಧ್ಯರಿಗೆ 'ಅಸಂಖ್ಯಾತ ಚರಲಿಂಗಾಧ್ಯಕ್ಷ' ಎಂಬ ವಿಶೇಷಣವೂ ಸ್ಪಷ್ಟವಾಗಿ ಕೊಡಲ್ಪಟ್ಟಿರುತ್ತವೆ. ಈ ಸಮಸ್ತ ಪ್ರಬಲಪ್ರಮಾಣಗಳಿಂದ ಶ್ರೀ ರೇವಣಾರಾಧ್ಯರು ಹನ್ನೆರಡು ಸಾವಿರ ಚರರಿಗೆ ಗುರುಗಳಾಗಿದ್ದರೆಂದೂ, ಶ್ರೀಮನ್ಮರುಳಾರಾಧ್ಯರು ಆರು ಸಾವಿರಚರರಿಗೆ ಗುರುಗಳಾಗಿದ್ದರೆಂದೂ, ಶ್ರೀಮದೇಕೋರಾಮಾರಾಧ್ಯರು ಮೂರು ಸಾವಿರ ಚರರಿಗೆ ಗುರುಗಳಾಗಿದ್ದರೆಂದೂ ಹಾಗೂ ಶ್ರೀಪಂಡಿತಾರಾಧ್ಯರು ಅಸಂಖ್ಯಾತಚರರಿಗೆ ಗುರುಗಳಾಗಿದ್ದರೆಂದೂ ತೋರುತ್ತದೆ. ಈ ಶಿವಾಗಮೋಕ್ತಿಗಳಂತೆ ಇಂದಿನವರೆಗೂ ಸ್ವಲ್ಪ ಹೆಚ್ಚುಕಡಿಮೆ ಅಷ್ಟು ಚರಮಠಗಳು ಉಂಟೇ ಉಂಟು. ಕಾಶೀ ಸಿಂಹಾಸನಾಧೀಶರಾದ

ಶ್ರೀಮಜ್ಜಗದ್ಗುರು ವಿಶ್ವಾರಾಧ್ಯರ ಸಿಂಹಾಸನಮಠದಲ್ಲಿ ಅನೇಕಜಂಗಮ ಮೂರ್ತಿಗಳು ಇದ್ದ ಕಾರಣ ಆ ಸಿಂಹಾಸನವು "ಜಂಗಮವಾಡೀಮಠ" ಎಂಬ ಹೆಸರಿನಿಂದ ಪ್ರಸಿದ್ಧವಿರುತ್ತದಲ್ಲವೇ! ಆ ಸಿಂಹಾಸನದ ಎಷ್ಟೋ ಅಧಿಕಾರಿಗಳಿಗೆ ಅನೇಕಜನ ಮಹಾರಾಜರಿಂದ "ಜಂಗಮ" ರೆಂಬ ನಾಮವು ಕೊಡಲ್ಪಟ್ಟ ಬಗ್ಗೆ ಅನೇಕ ದಾಖಲೆಗಳುಂಟು. "ಚರಲಿಂಗ" ಎಂಬ ಶಬ್ದವು ಕೇವಲ ಗುರುಸ್ಥಲದ ಚರಮೂರ್ತಿಗಳನ್ನೇ ವಿಶೇಷವಾಗಿ ಬೋಧಿಸುತ್ತದೆ. ಹೀಗಿದ್ದು ಈ ಶಬ್ದವು ವಿರಕ್ತರನ್ನು ಬಿಟ್ಟು ಉಳಿದವ ರಲ್ಲಿ ಸಂಭವಿಸುವುದಿಲ್ಲವೆಂದು ಒಂದುವೇಳೆ ಅಶಾಸ್ತ್ರೀಯವಾಗಿ ನುಡಿ ದಾಗ್ಯೂ ವಿರಕ್ತರಿಗಾದರೂ ಮೇಲಿನ ವಿಶೇಷಣಗಳಿಂದ ಆಚಾರ್ಯರು ಗುರುಗಳಾಗುತ್ತಾರೆಂದು ಸ್ಪಷ್ಟವಾಗಿ ತೋರುವುದಲ್ಲವೇ? ಇರಲಿ; ಸದ್ಯಃ ಅಷ್ಟಾವರಣಾಂತರ್ಗತ ಜಂಗಮರು ಯಾರು? ಎನ್ನುವ ವಿಷಯವನ್ನು ವಿಚಾರಿಸೋಣ! ವೀರಶೈವ ಮತದಲ್ಲಿ ನಾನಾಪ್ರಕಾರದ ಜಂಗಮ ರಿರುತ್ತಾರೆ.

ವ್ಯವಹಾರಪರಾ ಯೇಚ ಯೇ ಸೇವಾಪರಜಂಗಮಾಃ ।
ನಾಸ್ತಿ ತೇಷಾಂ ಮಹಾದೀಕ್ಷಾ ವೀರಮಾಹೇಶ್ವರಾಭಿಧಾ ॥

ಇತಿ ವೀರಶೈವಸದಾಚಾರಸಂಗ್ರಹೇ.

ಜಂಗಮಂ ಪೂಜಯೇದ್ಯಸ್ತು ಸಾಕ್ಷಾನ್ಮದ್ರೂಪಮೀಶ್ವರಂ ।
ಸ ಮಾಂ ಪೂಜಿತವಾನೇವ ಸೋಽಹಂ ದೇವಿ ನಸಂಶಯಃ ॥

ಇತಿ ಪಾರಮೇಶ್ವರಾಗಮೇ.

ಇತ್ಯಾದಿ ಶಿವಾಗಮವಾಕ್ಯಗಳಿಂದ ವ್ಯವಹಾರಪರಜಂಗಮರೆಂ ತಲೂ, ಸೇವಾಪರಜಂಗಮರೆಂತಲೂ ಹಾಗೂ ಜಂಗಮರೆಂತಲೂ ಅನೇಕ ಪ್ರಕಾರದ ಜಂಗಮರು ಕಂಡುಬರುತ್ತಾರೆ. ಇಷ್ಟು ಪ್ರಕಾರದ ಜಂಗಮರಲ್ಲಿ ಅಷ್ಟಾವರಣಾಂತರ್ಗತ ಜಂಗಮರು ಯಾರು? ಎಂಬ

ಪ್ರಶ್ನವು ಉಪಸ್ಥಿತವಾಗುತ್ತದೆ. ಅಷ್ಟಾವರಣಾಂತರ್ಗತ ಜಂಗಮರು ಮಹಾಪೂಜ್ಯರಾಗಿರೋಣದರಿಂದ ವ್ಯವಹಾರಪರಜಂಗಮರಲ್ಲಿಯೂ ಸೇವಾಪರಜಂಗಮರಲ್ಲಿಯೂ ಈ ಜಂಗಮತ್ವವು ಸಂಭವಿಸುವುದಿಲ್ಲ. ಯಾಕಂದರೆ—ಇವರಿಗೆ ವೀರಮಾಹೇಶ್ವರದೀಕ್ಷೆಯನ್ನು ಕೊಡಬಾರ ದೆಂದು ಧರ್ಮಶಾಸ್ತ್ರವು ವಿಧಿಸುತ್ತದೆಯಷ್ಟೇ! ಈ ತರಹದ ಮಹಾದೀಕ್ಷೆ ಯಿಂದ ಇವರು ದೂರರಾದಮೇಲೆ ಇವರಿಗೆ ಪೂಜ್ಯತ್ವಾಧಿಕಾರವು ಹೇಗೆ ಸಂಭವಿಸುವುದು? ಅಂದಮೇಲೆ ಈ ಈರ್ವರು ಅಷ್ಟಾವರಣಾಂತರ್ಗತ ಜಂಗಮಪದವಾಚ್ಯರಾಗುವುದಿಲ್ಲ. ಇನ್ನು ನಾವೇ ಜಂಗಮಮೂರ್ತಿ ಗಳೆಂದು ಹೇಳಿಕೊಳ್ಳುವ ವಿರಕ್ತರಲ್ಲಿಯೂ ಶಾಸ್ತ್ರಸಿದ್ಧಜಂಗಮಮೂರ್ತಿ ಗಳೆಂದು ಪ್ರಸಿದ್ಧರಾದ ಗುರುಸ್ಥಲದ ಚರಮೂರ್ತಿಗಳಲ್ಲಿಯೂ ಜಂಗಮ ಪದವಾಚ್ಯರು ಯಾರು ಆಗುತ್ತಾರೆನ್ನುವದನ್ನು ವಿಚಾರಿಸೋಣ! ಗುರು ಲಿಂಗ ಜಂಗಮ ಈ ಮೂರು ವಸ್ತುಗಳು ಒಂದೇ ಮೂರ್ತಿಯ ಭೇದವಾಗಿರೋಣದರಿಂದ ಸಮಾನಗಳಾಗಿರುತ್ತವೆಂದು ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತವೆ.

ಏಕಏವ ಶಿವಃ ಸಾಕ್ಷಾತ್ಸರ್ವಾನುಗ್ರಹಕಾರಕಃ ।
ಗುರುಜಂಗಮಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ ॥

ಇತಿ ಸಿದ್ಧಾಂತಶಿಖಾಮಣೌ.

"ಏಕಮೂರ್ತಿಸ್ತ್ರಯೋ ಭಾಗಾ ಗುರುರ್ಲಿಂಗಂತು ಜಂಗಮಃ"

ಗುರು-ಲಿಂಗ-ಜಂಗಮ ಈ ಮೂರು ವಸ್ತುಗಳನ್ನು ವಿಚಾರಿಸು ತ್ತಿರಲಿಕ್ಕೆ ಒಂದೊಂದು ವಸ್ತುವಿನಿಂದ ಅಷ್ಟಾವರಣಗಳು ಸಿದ್ಧಿಸುತ್ತವೆ. ಗುರುವಿನಿಂದ ಗುರುವಾಗುತ್ತಾನೆ; ಲಿಂಗವಾಗುತ್ತದೆ; ಜಂಗಮನಾಗು ತ್ತಾನೆ; ಹಾಗೂ ಪಾದೋದಕ ಪ್ರಸಾದಾದಿಗಳು ಸಂಭವಿಸುತ್ತವೆ. ಅರ್ಥಾತ್ ಗುರುವು ಇಷ್ಟಲಿಂಗವನ್ನೊಂದನ್ನು ಕೊಟ್ಟು ಅನುಗ್ರಹಿಸಿ ದ್ದಾದರೆ ಎಲ್ಲಾ ಆವರಣಗಳು ತದ್ದ್ವಾರಾ ಪ್ರಾಪ್ತವಾಗುತ್ತವೆಂದು

ಸಿದ್ಧಾಂತವು. ಹಾಗೂ ಗುರುವಿನಂತೆ ಲಿಂಗದಿಂದಾದರೂ ಅಷ್ಟಾವರಣಗಳು ಸಿದ್ಧಿಯಾಗುತ್ತವೆ. ಅರ್ಥಾತ್ ಲಿಂಗದಿಂದ ಗುರುವಾಗುತ್ತಾನೆ, ಜಂಗಮನಾಗುತ್ತಾನೆ; ಲಿಂಗದ ಸಂಬಂಧವಿರೋಣದರಿಂದಲೇ ಪಾದೋದಕ ಪ್ರಸಾದಾದಿಗಳು ಪ್ರಾಪ್ತವಾಗುತ್ತವೆ. ಲಿಂಗಸಂಬಂಧವಿಲ್ಲದ ಪಕ್ಷದಲ್ಲಿ ಗುರುವಾಗುವುದಿಲ್ಲ, ಜಂಗಮನಾಗುವುದಿಲ್ಲ, ಹಾಗೂ ಪಾದೋದಕ ಪ್ರಸಾದಾದಿಗಳು ಪ್ರಾಪ್ತವಾಗುವುದಿಲ್ಲ. ಅಂದಮೇಲೆ ಲಿಂಗದಿಂದಾದರೂ ಅಷ್ಟಾವರಣಗಳು ಸಿದ್ಧಿಯಾದವು. ಈ ಗುರುಲಿಂಗಗಳಂತೆ ಅವುಗಳಿಗೆ ಸಮಾನಧರ್ಮಗಳುಳ್ಳ ಜಂಗಮನಿಂದಾದರೂ ಅಷ್ಟಾವರಣಗಳು ಆವಶ್ಯವಾಗಿ ಸಿದ್ಧಿಸಬೇಕಲ್ಲವೇ? ವಿರಕ್ತನೇ ಅಷ್ಟಾವರಣಾಂತರ್ಗತ ಜಂಗಮನೆಂದು ಗ್ರಹಣಮಾಡಿದ್ದಾದರೆ, ಗುರುಲಿಂಗಗಳಂತೆ ಅವನಿಂದ ಅಷ್ಟಾವರಣಗಳು ಸಿದ್ಧಿಸುವುದಿಲ್ಲ. ಯಾಕಂದರೆ—ವಿರಕ್ತನಿಗೆ ಶಾಸ್ತ್ರರೀತಿಯಾಗಿ ಮುಕ್ತಿಗೆ ಮೂಲಭೂತವಾದ ಲಿಂಗವನ್ನು ಕೊಟ್ಟು ಅನುಗ್ರಹಿಸತಕ್ಕ ಅಧಿಕಾರವು ಇರುವುದಿಲ್ಲ. ಯಾವಾಗ್ಗೆ ಮುಖ್ಯವಾದ ಲಿಂಗದಾನಲೋಪವೋ ಆದರ ಹಿಂದೆಯೇ ಕೈಮುತಿಕನ್ಯಾಯದಿಂದ ಪಾದೋದಕ ಪ್ರಸಾದ ಮಂತ್ರಾದಿಗಳಿಗೆ ಲೋಪವು ಅರ್ಥಾತ್ ಸಿದ್ಧವೇ ಆಗುತ್ತದೆ. ಗುರುತ್ವ ಜಂಗಮತ್ವಾಧಿಕಾರಗಳು ಇವನಿಂದ ಲಭಿಸುವುದಂತೂ ದೂರೇ ಉಳಿಯಿತು. ಹೀಗಾದಮೇಲೆ ಸಮಾನ ಧರ್ಮಗಳುಳ್ಳ ಗುರುಲಿಂಗಜಂಗಮರಲ್ಲಿ ಇವನು ಜಂಗಮಪದವಾಚ್ಯನು ಹೇಗೆ ಆಗುವನು? ಎಂದೂ ಆಗುವುದಿಲ್ಲ. ಆಗುವನೆಂದು ದುರಭಿಮಾನದಿಂದ ನುಡಿದದ್ದಾದರೆ ಪೂರ್ವದಲ್ಲಿ ಸಮಾನಧರ್ಮವುಳ್ಳವುಗಳೆಂದು ಶಿವಾಗಮಾದಿಗಳಿಂದ ಪ್ರತಿಪಾದಿಸಲ್ಪಟ್ಟ ಗುರುಲಿಂಗಜಂಗಮರಲ್ಲಿ ಸಮಾನಧರ್ಮಚ್ಯುತಿಪ್ರಸಂಗವು ಬಂದೊದಗುವುದು. ಆದಕಾರಣ ವಿರಕ್ತನು ಅಷ್ಟಾವರಣಾಂತರ್ಗತ ಜಂಗಮಪದವಾಚ್ಯನಾಗುವುದಿಲ್ಲವೆಂದೇ ಧರ್ಮಶಾಸ್ತ್ರದ ಶಾಸನವು. ಅಂದಮೇಲೆ ಜಂಗಮಪದವಾಚ್ಯರು ಯಾರು?

ಎಂದು ಪ್ರಶ್ನವು ಉಪಸ್ಥಿತವಾಗಲಾಗಿ ಗುರುಸ್ಥಲೀಯ ಚರಮೂರ್ತಿಗಳೇ ಜಂಗಮಪದವಾಚ್ಯರಾಗುತ್ತಾರೆಂದು ಶಾಸ್ತ್ರೀಯೋತ್ತರವು ದೊರೆಯುತ್ತದೆ. ಹೇಗೆಂದರೆ— ಈ ಚರಮೂರ್ತಿಗಳು (ಜಂಗಮಮೂರ್ತಿಗಳು) ಶಾಸ್ತ್ರಾನುಸಾರವಾಗಿ ಲಿಂಗವನ್ನು ಕೊಡಲಿಕ್ಕೆ ಅರ್ಹರಿದ್ದಾರೆ. ಲಿಂಗದಾನದ್ವಾರಾ ಅಷ್ಟಾವರಣಗಳು ಗುರುವಿನಂತೆ ಇವರಲ್ಲಿಯಾದರೂ ಸಂಭವಿಸುತ್ತವೆ. ಆದಕಾರಣ ಜಂಗಮಪದವಾಚ್ಯರು ಯಥಾರ್ಥಾಭಿಧಾನವುಳ್ಳ ಚರಮೂರ್ತಿಗಳಲ್ಲದೆ ವಿರಕ್ತರಾಗುವದಿಲ್ಲವೆಂದು ಶಾಸ್ತ್ರಸಿದ್ಧಾಂತವು. ಇದಲ್ಲದೆ ಸೂಕ್ಷ್ಮರೀತಿಯಾಗಿ ಗುರುಲಿಂಗಜಂಗಮರೊಳಗೆ ಒಂದೊಂದು ವಸ್ತುವಿನಲ್ಲಿ ವಸ್ತುತ್ರಯದ ಸಂಬಂಧವಿರುತ್ತದೆ. ಅಂದರೆ ಗುರುವಿನಲ್ಲಿ ಗುರುತ್ವ ಲಿಂಗತ್ವ ಜಂಗಮತ್ವಗಳುಂಟು; ಲಿಂಗದಲ್ಲಿ ಲಿಂಗತ್ವ ಗುರುತ್ವ ಜಂಗಮತ್ವಗಳುಂಟು; ಆದರಂತೆ ಜಂಗಮನಲ್ಲಿ ಜಂಗಮತ್ವ ಗುರುತ್ವ ಲಿಂಗತ್ವಗಳುಂಟು. ಹೀಗೆ ಶಾಸ್ತ್ರರೀತಿಯಿದ್ದು ಗುರುಲಿಂಗಗಳಲ್ಲಿ ತದ್ಭಿನ್ನವಸ್ತುಧರ್ಮಸಮಾವೇಶವು ಉತ್ತಮವಾಗಿ ಆಗುತ್ತದೆ. ಆದರೆ ವಿರಕ್ತನೇ ಜಂಗಮನೆಂದು ಹೇಳಿದ ಪಕ್ಷದಲ್ಲಿ ಆವನಲ್ಲಿ ಯಾವರೀತಿಯಿಂದಲೂ ಗುರುತ್ವವು ಸಿದ್ಧಿಸುವುದಿಲ್ಲ. ವೀರಶೈವ ಧರ್ಮಶಾಸ್ತ್ರದಲ್ಲಿ ಮುಖ್ಯವಾಗಿ ಗುರುಲಕ್ಷಣವೇನೆಂದರೆ,—

ಗುರೂಣಾಂ ಲಕ್ಷಣಂ ಚೈವ ಶಿಕ್ಷಾರಕ್ಷಣಕರ್ಮಣಿ ।
ಆಹ್ವಾನೇಚ ವಿಸರ್ಗೇಚ ಯಃ ಸ್ವತಂತ್ರಃ ಸವೈ ಗುರುಃ ॥
ಮತ್ಪಂಚವದನೋದ್ಭೂತಾಃ ಸರ್ವ ಏವ ಗುರೂತ್ತಮಾಃ ।
ತತ್ಸೃಷ್ಟಾನಾಂಚ ಸರ್ವೇಷಾಂ ತತ್ಸಾಮರ್ಥ್ಯಂ ಕಥಂಭವೇತ್ ॥
ಉಪದೇಶೇ ವಿವಾಹೇಚ ಶಿಕ್ಷಾಯಾಂ ರಕ್ಷಣೇಽಪಿಚ ।
ತ ಏವ ಮುಖ್ಯಗುರವಃ ಪ್ರಧಾನಾಸ್ತೇ ಪ್ರಕೀರ್ತಿತಾಃ ॥ಇತಿ॥

ಅಂದರೆ ಯಾವನು ಶಿಕ್ಷಾಮಾಡುವುದರಲ್ಲಿ ರಕ್ಷಣಮಾಡುವುದರಲ್ಲಿ ಆಹ್ವಾನದಲ್ಲಿ ವಿಸರ್ಜನದಲ್ಲಿ ವಿವಾಹದಲ್ಲಿ ಹಾಗೂ ಉಪದೇಶ

ಮಾಡುವುದರಲ್ಲಿ ಸ್ವತಂತ್ರನೋ ಅವನೇ ಮುಖ್ಯ ಗುರುವೆನಿಸಿಕೊಳ್ಳು ತ್ತಾನೆ. ಅಂಥ ಸರ್ವೋತ್ತಮ ಗುರುಗಳೇ ನನ್ನ ಐದೂ ಮುಖಗಳಿಂದ ಅವತರಿಸಿದ ಪಂಚಾಚಾರ್ಯರು. ಅವರಿಂದ ಜನಿಸಿದ ಸಕಲವೀರಶೈವ ಶಿಷ್ಯರಿಗೆ ಅವರ ಸಾಮರ್ಥ್ಯವು ಹೇಗೆ ಬಂದೀತೆಂದು ಸುಪ್ರಬೋಧಾ ಗಮದಲ್ಲ ಸಾಕ್ಷಾತ್ಪರಮೇಶ್ವರನು ಪಾರ್ವತಿಯ ಮುಂದೆ ಅಪ್ಪಣೆ ಕೊಡಿಸಿರುತ್ತಾನೆ. ವಿರಕ್ತರಲ್ಲಿ ಈ ತರಹದ ಗುರುಲಕ್ಷಣಗಳು ಸಂಭವಿಸುವುವೇನು ? ಒಂದೂ ಇಲ್ಲ ಯಾಕೆಂದರೆ—ವಿರಕ್ತರು ವೀರಶೈವ ಧರ್ಮಶಾಸ್ತ್ರಾನುಸಾರವಾಗಿ ಶಿಕ್ಷಾ ರಕ್ಷಾ ಉಪದೇಶ ಮೊದ ಲಾದ ಯಾವ ಕಾರ್ಯಗಳಿಗೂ ಬದ್ಧರಲ್ಲ; ಅಂದಮೇಲೆ ಅವರಲ್ಲಿ ಗುರುತ್ವವು ಹೇಗೆ ಸಂಭವಿಸುವುದು ? ಇದರಿಂದಲೂ ಕೂಡ ವಿರಕ್ತನು ಜಂಗಮಪದವಾಚ್ಯನಾಗುವುದಿಲ್ಲವೆಂದು ಸ್ಪಷ್ಟವಾಗಿ ತೋರಿಬರುತ್ತದೆ. ಕೆಲ ಜನರು ವಿರಕ್ತರು ಜ್ಞಾನೋಪದೇಶವನ್ನು ಮಾಡಲಿಕ್ಕೆ ಅರ್ಹ ರಿದ್ದಾರೆಂದು ಸ್ವಧರ್ಮಶಾಸ್ತ್ರವನ್ನರಿಯದೆ ಹಗಲಿರುಳು ಬಡಬಡಿಸು ತ್ತಾರೆ ಮಹಾಶಯರೇ ! ನಮ್ಮ ಶಾಸ್ತ್ರದ ತತ್ತ್ವವು ಹಾಗಿಲ್ಲ. ಯಾವನು ದೀಕ್ಷಾಗುರುವೋ ಅವನೇ ಶಿಕ್ಷಾಗುರುವೂ ಅವನೇ ಮೋಕ್ಷ ಗುರು (ಜ್ಞಾನಗುರು) ವೂ ಆಗುತ್ತಾನೆ. ಈ ಬಗ್ಗೆ ಪಂಡಿತರು ಸನ್ನ್ಯಾ ಸಾಶ್ರಮವಿಮರ್ಶದಲ್ಲಿಯೇ— "ದೀಯತೇ ಪರಮಂ ಜ್ಞಾನಂ" ಇತ್ಯಾದಿ ಸಿದ್ಧಾಂತಶಿಖಾಮಣಿಯ ಹಾಗೂ ವಾತುಲಾಗಮದ ಪ್ರಮಾಣ ಗಳಿಂದ ಪ್ರತಿಪಾದನಮಾಡಿದ್ದಾರೆ. ಇರಲಿ; ಪೂರ್ವದ ಶಾಸ್ತ್ರಪದ್ಧತಿ ಯು ಹೇಗೆಂದರೆ—ವಟುಗಳು ತಮ್ಮ ತಮ್ಮ ಗೋತ್ರಕ್ಕನುಸಾರವಾಗಿ ಯಾವ ಗುರುವಿನ ಕಡೆಯಿಂದ ದೀಕ್ಷೆಯನ್ನು ಪಡೆದುಕೊಳ್ಳುವರೋ ಆ ವಟುಗಳ ವಿಷಯದಲ್ಲಿ ಆಗ್ಗೆ ಆ ಗುರುಗಳು ದೀಕ್ಷಾಗುರುಗಳಾಗುವರು. ಅನಂತರ (ದೀಕ್ಷೆಯಾದನಂತರ) ಆ ವಟುಗಳು ಎರಡನೆಯ ಕಡೆಗೆ ವಿದ್ಯಾಭ್ಯಾಸವನ್ನು ಮಾಡದೆ "ಅಥ ಶಿವದೀಕ್ಷಾನಂತರಂ ವೇದ

ವ್ರತಚತುಷ್ಟಯಃ । ತತ್ರ ವೀರಾದಿಗೋತ್ರಜಾನಾಂ ಋಗಾದಿ ವೇದಿನಾಂವೇದಚತುಷ್ಟಯಾರಂಭೋ ವರ್ತತೇ । ತತ್ರಸ್ವವೇದಾ ರಂಭಂ ಪೂರ್ವಂ ಕೃತ್ವಾ ತದಾಹುತೀರ್ಹುತ್ವಾ ತತೋಽನ್ಯ ವೇದಂ ಪಠೇತ್ ॥ ಸ್ವವೇದಾರಂಭಮಂತರಾಽನ್ಯವೇದಾರಂಭೇ ದೋಷಃ । ತಥಾಚ । ಅಧೀತ್ಯ ಶಾಖಾಮಾತ್ಮೀಯಾಮನ್ಯಶಾ ಖಾಂ ತತಃಪಠೇತ್ । ಸ್ವಶಾಖಾಂಯಃ ಪರಿತ್ಯಕ್ತಃಶಾಖಾರಂಡಃ ಸ ಉಚ್ಯತೇ ॥ ಇತಿ ವೀರಶೈವ ದೀಕ್ಷಾವಿಧೌ.

"ಸ್ವಶಾಖಾಧ್ಯಯನಪೂರ್ವಕಂ ಸರ್ವವಿದ್ಯಾಭ್ಯಾಸಂಕೃತ್ವಾ ದ್ವಾದಶವರ್ಷಶುಶ್ರೂಷಾಪೂರ್ವಕಂ ಬ್ರಹ್ಮಚರ್ಯಂನಿರ್ವೃತ್ಯ" ಇತ್ಯಾದಿ ಶ್ರುತಿವಾಕ್ಯಗಳ ಅಭಿಪ್ರಾಯವಿರ್ಪಂತೆ, ತಮ್ಮ ಶಾಖಾನು ವರ್ತಿಗಳಾದ ದೀಕ್ಷಾಗುರುಗಳಲ್ಲಿಯೇ ಹನ್ನೆರಡು ವರ್ಷಗಳವರೆಗೆ ಅವರ ಸೇವೆಯಲ್ಲಿದ್ದು ಅವರಿಂದಲೇ ವೇದೋಪನಿಷದಾದಿಗಳ ಶಿಕ್ಷಣವನ್ನು ಪಡೆಯಬೇಕು. ಆ ವಟುಗಳಿಗೆ ಈ ತರಹದ ಧಾರ್ಮಿಕ ಶಿಕ್ಷಣವನ್ನು ಕೊಡೋಣದರಿಂದ ಆಗ್ಗ ಆ ದೀಕ್ಷಾಗುರುಗಳೇ ಶಿಕ್ಷಾಗುರುಗಳೆಂದೆನಿಸಿ ಕೊಳ್ಳುತ್ತಾರೆ. ಇಷ್ಟಾಗುವದರೊಳಗೆ ಇಪ್ಪತ್ತು ವರ್ಷಗಳು ಮುಗಿ ಯುತ್ತವೆ. ಆ ಮೇಲೆ ಆ ವಟುಗಳು ಮನಃಸಂಸ್ಕಾರತಾರತಮ್ಯಕ್ಕನು ಸಾರವಾಗಿ ಗೃಹಸ್ಥಾಶ್ರಮಿಗಳಾದರೂ ಆಗಬಹುದು; ಅಥವಾ ಪೂರ್ವ ದಲ್ಲಿ ವೇದೋಪನಿಷದಾದಿಗಳನ್ನು ಅಧ್ಯಯನಮಾಡಿದವರಾದುದರಿಂದ ಅವುಗಳಲ್ಲಿ ವಿಶೇಷವಾಗಿ ಸಂಸಾರ ಹೇಯತ್ವವು ಪ್ರತಿಪಾದಿಸಿರೋಣದ ರಿಂದ ಕೆಲವರಿಗೆ ಹೇಯಬುದ್ಧಿಯು ಹುಟ್ಟಿ ಸನ್ಯಾಸಿಗಳಾದರೂ ಆಗ ಬಹುದು. ಆದಕಾರಣದಿಂದಲೇ ಶ್ರುತಿಯಾದರೂ "ಯದಹರೇವ ವಿರಜೇತ್ತದಹರೇವ ಪ್ರವ್ರಜೇತ್" ಎಂದು ಸಾರುತ್ತದೆ. ಇಂಥ ವಟುಗಳು ತಮಗೆ ವೇದಾಗಮಾದಿಗಳ ಶಿಕ್ಷಣವನ್ನು ಕೊಟ್ಟ ದೀಕ್ಷಾ ಗುರುಗಳ ಕಡೆಯಿಂದಲೇ ಮುಕ್ತಿಮಾರ್ಗಸಾಧನೀಭೂತವಾದ ಜ್ಞಾನೋ

ಪದೇಶವನ್ನು ಪಡೆದುಕೊಳ್ಳಬೇಕು. ಆಗ್ಗೆ ಅವರಿಗೆ ಆ ದೀಕ್ಷಾಗುರು ಗಳೇ ಜ್ಞಾನಗುರು (ಮೋಕ್ಷಗುರು) ಗಳಾಗುತ್ತಾರೆ. ಇದೇ ವೀರಶೈವ ಧರ್ಮಶಾಸ್ತ್ರದ ಯಥಾರ್ಥತತ್ತ್ವವಿರುತ್ತದೆ ಹೀಗಿದ್ದು ಸ್ವಧರ್ಮ ಶಾಸ್ತ್ರವಿರುದ್ಧವಾಗಿ ವಿರಕ್ತರೇ ಜ್ಞಾನಗುರುಗಳೆನ್ನುವುದು ಅತ್ಯಂತ ಮೂರ್ಖತನದ ಮಾತಾಗಿರುತ್ತದೆ. ಯಾವರೀತಿಯಿಂದಲೂ ವಿರಕ್ತರಲ್ಲಿ ಗುರುತ್ವವು ಸಂಭವಿಸುವದಿಲ್ಲವಾದುದರಿಂದ ಅವರಲ್ಲಿ ಜಂಗಮತ್ವ ವಿಲ್ಲವೆನ್ನುವುದೇ ಸಿದ್ಧಾಂತವು. ಇರಲಿ;

ಮತ್ತೊಂದು ಪಕ್ಷವು—

ತನುಂ ಸಮರ್ಪ್ಯ ಗುರವೇ ಜಂಗಮಾಯ ಧನಂ ತಥಾ ।
ಮನಃ ಸಮರ್ಪ್ಯ ಲಿಂಗಾಯ ವರ್ತಂತೇಹಿ ಮಹೇಶ್ವರಿ ॥

ಎಂಬ ಆಗಮವಾಕ್ಯದಂತೆ ವೀರಶೈವರು ಗುರುವಿಗೆ ತನುವನ್ನೂ, ಲಿಂಗಕ್ಕೆ ಮನವನ್ನೂ, ಜಂಗಮನಿಗೆ ಧನವನ್ನೂ ಅರ್ಪಿಸುವುದು ಸ್ವಭಾವಸಿದ್ಧವಾದ ಧರ್ಮವಾಗಿರುತ್ತದೆ. ಗುರುವಿಗೆ ತನುವನ್ನು ಸಮ ರ್ಪಿಸಬೇಕೆಂದರೆ, ಗುರುವಿನ ಸೇವೆಯಲ್ಲಿ ತನ್ನ ದೇಹವನ್ನು ಚನ್ನಾಗಿ ಸವಿಸಬೇಕು; ಇದೇ ಗುರುವಿಗೆ ತನುಸಮರ್ಪಣವೆನಿಸುತ್ತದೆ. ಲಿಂಗಕ್ಕೆ ಮನವನ್ನು ಅರ್ಪಿಸಬೇಕೆಂದರೆ, ಗುರುವಿನಿಂದ ಕೊಡಲ್ಪಟ್ಟ ಇಷ್ಟಲಿಂಗ ದಲ್ಲಿ ದೃಷ್ಟಿಯನ್ನು ಇಟ್ಟು ಏಕಾಗ್ರಮನಸ್ಸುಳ್ಳವನಾಗಬೇಕು; ಇದೇ ಲಿಂಗಕ್ಕೆ ಮನಃಸಮರ್ಪಣವೆನಿಸುತ್ತದೆ. ಜಂಗಮನಿಗೆ ಧನವನ್ನು ಅರ್ಪಿಸಬೇಕೆಂದರೆ, ತನ್ನ ಶಕ್ತ್ಯನುಸಾರವಾಗಿ ಕಾಣಿಕೆಯನ್ನು ಕೊಡ ಬೇಕು; ಇದೇ ಜಂಗಮನಿಗೆ ಧನಸಮರ್ಪಣವೆನಿಸುತ್ತದೆ. ಮೇಲಿನ ಎರಡು ವಸ್ತು (ಗುರುಲಿಂಗ) ಗಳಿಗಂತೂ ಉಕ್ತಯೋಜನೆಯು ಚನ್ನಾಗಿಯೇ ಆಗುತ್ತದೆ. ಆದರೆ ಮೂರನೆಯ ವಸ್ತುವಿನ ಬಗ್ಗೆ ವಿವಾದವು ಬರುವ ಕಾರಣ ವಿಚಾರಿಸಬೇಕಾಗುತ್ತದೆ. ಯಾಕಂ

ದರೆ—ಈ ಶಾಸ್ತ್ರಗಳ ಅಭಿಪ್ರಾಯದಂತೆ ವಿರಕ್ತರೇ ಜಂಗಮಪದವಾಚ್ಯ ರಾದಲ್ಲಿ ಆಗಮಾಗಮಗಳಿಗೆಯೇ ವಿರೋಧವು ಬರುತ್ತದೆ.

ಸುವರ್ಣರತ್ನಪ್ರಮುಖವಸ್ತುವೃದ್ಧ್ಯುಪಜೀವನಾತ್ ।
ಅತಿವರ್ಣೋ ಯದಿ ಚರೇತ್ಸೋಽಯಂ ಪಾತಕಿನಾಂ ವರಃ ॥
ಇತಿ ಸೂಕ್ಷ್ಮಾಗಮೇ.

ಯದೃಚ್ಛಯಾ ಲಬ್ಧಶೈವಪ್ರಸಾದಾಸ್ವಾದನೇ ರತಃ ।
ಕಾಯೇನ ಮನಸಾ ವಾಚಾ ತ್ಯಕ್ತಭೂವಿತ್ತಕನ್ಯಕಃ ॥
ಇತಿ ಪಾಶುಪತತಂತ್ರೇ.

ಸ್ಪೃಹಾಂ ಗೋಮಾಂಸಮಿವ ಜ್ಞಾತಚರದೇಶಂ ಚಂಡಾಲವಾಟಿಕಾಮಿವ । ಸ್ತ್ರಿಯಮಹಿಮಿವ ಸುವರ್ಣಂ ಕಾಲಕೂಟಮಿವ ॥
ಇತಿ ಸನ್ಯಾಸೋಪನಿಷದಿ.

ಬ್ರಹ್ಮಚಾರಿಣೇ ತಾಂಬೂಲಂ ವಾನಪ್ರಸ್ಥಾಯ ಗೋಪಯಃ ।
ಯತಯೇ ಕಾಂಚನಂ ದದ್ಯಾದ್ದಾತಾಚ ನರಕಂ ವ್ರಜೇತ್ ॥
ಇತಿ ಸುಪ್ರಬೋಧಾಗಮೇ.

ಇತ್ಯಾದ್ಯಾಗಮೋಪನಿಷದ್ವಾಕ್ಯಗಳಿಂದ ವಿರಕ್ತನು ಸುವರ್ಣ ಮೊದಲಾದ ದ್ರವ್ಯವನ್ನು ಗ್ರಹಿಸಕೂಡದೆಂದೂ, ಗ್ರಹಿಸಿದ್ದಾದರೆ ಮಹಾ ಪಾಪಿಯಾಗುವನೆಂದೂ ವಿರಕ್ತನಿಗೆ ಧನವನ್ನು ಕೊಟ್ಟದ್ದಾದರೆ ಕೊಟ್ಟ ವನು ನರಕಕ್ಕೆ ಹೋಗುವನೆಂದೂ ಸಿದ್ಧವಾಗುತ್ತದೆ. ಇಂದಮೇಲೆ ವಿರಕ್ತನೇ ಜಂಗಮಪದವಾಚ್ಯನಾದಲ್ಲಿ ಧನವನ್ನು ಅರ್ಪಿಸುವ ಬಗೆ ಹೇಗೆ? ಮೂಢಭಕ್ತಿಯಿಂದ ಅರ್ಪಿಸಿದರೆ ಅರ್ಪಿಸಿದವನು ನರಕಕ್ಕೆ ಹೋಗಬೇಕೋ? ವಿರಕ್ತನಿಗೆ ಜಂಗಮನೆಂದರೆ ಇಷ್ಟು ಕಠಿಣದೋಷವು ಪ್ರಾಪ್ತವಾಗುತ್ತದೆ; ಆದಕಾರಣ ವಿರಕ್ತನು ಅಷ್ಟಾ ವರಣಾಂತರ್ಗತ ಜಂಗಮಪದವಾಚ್ಯನು ಎಂದೂ ಆಗಲರಿಯನು.

ಆದರೆ ಯಥಾರ್ಥ ಜಂಗಮಪದವಾಚ್ಯರೆಂದು ಶಾಸ್ತ್ರರೂಢಿಗಳಿಂದ ಪ್ರಸಿದ್ಧರಿರುವ ಗುರುಸ್ಥಲದ ಚರಮೂರ್ತಿಗಳ ಕಡೆಗೆ ವಿಚಾರಿಸಿರಿ? ಇವರು ಸಕಲ ಶಿಷ್ಯಮಂಡಲಿಯ ಕಡೆಯಿಂದ ಕಾಣಿಕೆಯನ್ನು ತೆಗೆದುಕೊಳ್ಳಲು ಅರ್ಹರಿರುವರು. ಆದಕಡೆಯಿಂದಲೇ ಈ ಯಥಾರ್ಥಜಂಗಮರಿಗೆ ಧನವನ್ನು ಅರ್ಪಿಸತಕ್ಕದ್ದೆಂದು ಆಗಮಗಳು ಸಾರುವುದು ಅಕ್ಷರಶಃ ನಿಜವಿರುತ್ತದೆ. ಈ ಪಕ್ಷದಿಂದಲೂ ವಿಚಾರಿಸುತ್ತಿರಲಿಕ್ಕೆ ವಿರಕ್ತರಲ್ಲಿ ಜಂಗಮತ್ವ ಸ್ಥಿರೀಕರಣವೆಂಬ ನರಿಯು ಅಡವಿಯನ್ನು ಹಿಡಿದು ಪತ್ತೆಯಿಲ್ಲದೆ ಪಲಾಯನ ಮಾಡಿದಂತಾಯಿತು. ಇರಲಿ, ಆದರೆ ಈ ವಿಷಯದಲ್ಲಿ ಕೆಲವರು ಧನವೆಂದರೆ ದ್ರವ್ಯವಲ್ಲ, ಅಂತರಂಗಿಕವಸ್ತುವಿರುತ್ತದೆ; ಆದ್ದರಿಂದ ಇದು ವಿರಕ್ತರಿಗೇ ಸಂಬಂಧಿಸುತ್ತದೆಂದು ಮೂಢತಾಪರವಶರಾಗಿ ಆಡುತ್ತಾರೆ. ಇದು ಅತ್ಯಂತ ತಪ್ಪು! ಸ್ಥೂಲರೀತಿಯಿಂದಲೂ ಸೂಕ್ಷ್ಮರೀತಿಯಿಂದಲೂ ಇದು ಜಂಗಮಪದವಾಚ್ಯರಾದ ಚರಮೂರ್ತಿಗಳಲ್ಲಿಯೇ ಸಂಭವಿಸುತ್ತದೆಯೇ ಹೊರತು ವಿರಕ್ತರಲ್ಲಿ ಎಂದೂ ಸಂಭವಿಸುವುದಿಲ್ಲವೆಂದು ಶಾಸ್ತ್ರಸಿದ್ಧಾಂತವು.

ಮತ್ತೊಂದು ಪಕ್ಷವೇನೆಂದರೆ—

ವೀರಶೈವರಿಗೆ ಪ್ರತಿದಿನದಲ್ಲಿ ಗುರು-ಲಿಂಗ-ಜಂಗಮರ ಪಾದೋದಕಪ್ರಸಾದಾದಿಗಳು ಬೇಕೇಬೇಕಾಗುತ್ತವೆ. ಈ ತ್ರಿವಿಧ ಪಾದೋದಕಗಳಿಲ್ಲದೆ ವೀರಶೈವರು ಏನೂ ಗ್ರಹಿಸಕೂಡದೆಂದು ಧರ್ಮಶಾಸ್ತ್ರದ ಕಟ್ಟಳೆಯಿರುತ್ತದೆ. ಗುರುಗಳಂತೂ ಊರಲ್ಲಿಯೇ ಇರುವರು; ಲಿಂಗವಂತೂ ಸದಾ ದೇಹದಲ್ಲಿಯೇ ಇರುತ್ತದೆ. ಈ ಎರಡುವಸ್ತುಗಳ ಪಾದೋದಕ ಪ್ರಸಾದಗಳು ಅನಾಯಾಸವಾಗಿ ದೊರಕಿದಂತಾಗುತ್ತವೆ. ಇದರಂತೆ ಜಂಗಮರ ಪಾದೋದಕ ಪ್ರಸಾದಗಳು ದೊರಕಬೇಕಲ್ಲವೆ? ವಿರಕ್ತರೇ ಜಂಗಮರಾದ ಪಕ್ಷದಲ್ಲಿ—

ತ್ಯಕ್ತ್ವಾ ಗೃಹಮಠಾದೀನಿ ಮನುಷ್ಯಾದಿಸ್ಥಲಾನಿಚ ।
ನಿವಾಸಸ್ತೇನ ಕರ್ತವ್ಯೋ ವನೇ ಗಿರಿಗುಹಾದಿಷು ॥
ನ ವಿಶೇನ್ನಗರಂ ಗ್ರಾಮಂ ಗೃಹಂ ವಾ ಗೃಹಮೇಧಿನಾಂ ॥
ಇತಿ ಪಾಶುಪತತಂತ್ರೇ—

ಇತ್ಯಾದ್ಯಾಗಮ ವಾಕ್ಯಗಳಿಂದ ವಿರಕ್ತನಾದವನು ಮಠಮನೆ ಹಾಗೂ ಮನುಷ್ಯರಿದ್ದ ಸ್ಥಾನವನ್ನೂ ಕೂಡ ಬಿಟ್ಟು ಹೋಗಬೇಕೆಂದೂ ಅರಣ್ಯಗಿರಿ ಗಹ್ವರಗಳಲ್ಲಿ ವಾಸಮಾಡಬೇಕೆಂದೂ ಹಾಗೂ ಪಟ್ಟಣ ವನ್ನೂ ಹಳ್ಳಿಯನ್ನೂ ಕೂಡ ಪ್ರವೇಶಮಾಡಬಾರದೆಂದೂ ವಿಧಿಸಲ್ಪಟ್ಟಿ ರುತ್ತದೆ. ಅಂದಮೇಲೆ ಜಂಗಮರ ಪಾದೋದಕ ಪ್ರಸಾದಗಳನ್ನು ಹೇಗೆ ಸೇವಿಸಬೇಕು? ಯಾಕಂದರೆ ಪಾದೋದಕ ಪ್ರಸಾದಗಳು ನಿಂತ ನಿಂತಲ್ಲಿಯೇ ಸಿಗುತ್ತವೇನು? ಇಲ್ಲ. ಗೃಹಸ್ಥರ ಮನೆಗಳಲ್ಲಿ ಹೋಗಿ ಅವರ ಮನೆಯಲ್ಲಿ ಆಸನದಮೇಲೆ ಕುಳಿತುಕೊಳ್ಳತಕ್ಕದ್ದು. ಆಗ್ಗೆ ಅವರು ಭಕ್ತಿಪೂರ್ವಕವಾಗಿ ಷೋಡಶೋಪಚಾರಗಳಿಂದ ಪೂಜೆಯಂ ಗೈದು ಪಾದೋದಕ ಪ್ರಸಾದಗಳನ್ನು ಗ್ರಹಿಸುವರು. ವಿರಕ್ತನಿಗೆ ಗೃಹಪ್ರವೇಶವೇ ನಿಷೇಧಿಸಲ್ಪಟ್ಟಲ್ಲಿ ಈ ರೀತಿ ಉಪಚಾರಪೂರ್ವಕವಾಗಿ ಪಾದೋದಕ ಪ್ರಸಾದ ಗ್ರಹಣವು ಹೇಗೆ ಸಂಭವಿಸುವುದು? ಇದರ ಮೇಲಿಂದ ವಿಚಾರಿಸುತ್ತಿರಲಿಕ್ಕೆ ಜಂಗಮತ್ವವು ದೂರೇ ಉಳಿಯಿತು. ಅಂದಮೇಲೆ ಯಥಾರ್ಥ ಶಾಸ್ತ್ರೀಯ ಜಂಗಮತ್ವದಿಂದ ಕೂಡಿದ ಗುರು ಸ್ಥಲದ ಚರಮೂರ್ತಿಗಳೇ ಜಂಗಮರಾಗುತ್ತಾರೆ. ಯಾಕಂದರೆ ಇವರಿಗೆ ನಗರ ಗ್ರಾಮ ಗೃಹಸ್ಥರ ಗೃಹಪ್ರವೇಶವು ವಿರಕ್ತರಂತೆ ನಿಷೇಧಿಸಲ್ಪ ಟ್ಟಿಲ್ಲ. ಇವರು ಸ್ವಸಿದ್ಧಾಂತವನ್ನು ಸ್ಥಾಪನ ಮಾಡುವುದಕ್ಕಾಗಿ ಸರ್ವತ್ರ ಸಂಚರಿಸಬೇಕಾಗುತ್ತದೆ. ಇಂಥ ಪೂಜ್ಯ ಜಂಗಮಮೂರ್ತಿಗಳನ್ನೇ ಪೂಜಿಸಬೇಕೆಂದೂ ಇವರ ಪಾದೋದಕ ಪ್ರಸಾದಗಳನ್ನೇ ಸರ್ವರೂ ಗ್ರಹಿಸಬೇಕೆಂದೂ ಶಾಸ್ತ್ರಸಿದ್ಧಾಂತವು. ವೀರಶೈವರು ತಮ್ಮ ತಮ್ಮ

ಗೃಹಗಳಿಗೆ ಅಷ್ಟಾವರಣ ಪ್ರವಿಷ್ಟ ಜಂಗಮರನ್ನು ಪಲ್ಲಕ್ಕಿ ಮೊದಲಾದ ಸಕಲ ಬಿರುದುಗಳೊಡನೆ ಅತಿವೈಭವದಿಂದ ಕರೆದುಕೊಂಡುಹೋಗಿ ಉತ್ತಮರೀತಿಯಿಂದ ಪೂಜಿಸಿ ಉತ್ತಮೋತ್ತಮ ಪಕ್ವಾನ್ನಗಳನ್ನು ಅವರಿಗಾಗಿ ಸಿದ್ಧಮಾಡಿ ಅವರಿಂದ ಪ್ರಸಾದವನ್ನು ಗ್ರಹಿಸಬೇಕೆಂದು ಶಾಸ್ತ್ರಮತವಡೆ. ವಿರಕ್ತರೇ ಜಂಗಮರಾದ ಪಕ್ಷದಲ್ಲಿ—

ನಾಂದೋಲಿಕಾಂ ಸಮಾರೋಹೇದಶ್ವಾರೋಹಣವರ್ಜಿತಃ ।
ಪಾದಚಾರೀಚ ಸಂಭೂಯ ಚರೇದ್ಭೂವಲಯೇ ಸದಾ ॥

ಇತಿ ಪಾಶುಪತತಂತ್ರೇ.

ಸಂಧಿಶ್ಚ ವಿಗ್ರಹೋ ಯಾನಂ ಮಂಚಕಂ ಶುಕ್ಲವಸ್ತ್ರಕಂ ।
ತ್ಯಕ್ತಂ ಸನ್ಯಾಸಯೋಗೇನ ಗೃಹಧರ್ಮಾದಿಕಂ ವ್ರತಂ ॥

ಇತಿ ಸನ್ಯಾಸೋಪನಿಷದಿ.

ಯಾನಾರೋಹಂಯತಿಂ ದೃಷ್ಟ್ವಾ ಸಚೇಲಂ ಸ್ನಾನಮಾಚರೇತ್ ॥

ಇತ್ಯಾದಿ ಧರ್ಮಶಾಸ್ತ್ರ ವಾಕ್ಯಗಳು ವಿರಕ್ತನು ಪಲ್ಲಕ್ಕಿ ಮೊದಲಾದ ವಾಹನಗಳನ್ನು ಹತ್ತಬಾರದೆಂದೂ, ಒಂದುವೇಳೆ ಹತ್ತಿದ ವಿರಕ್ತನನ್ನು ನೋಡಿದರೆ ನೋಡಿದವನು ಸಚೇಲ (ವಸ್ತ್ರಸಹಿತ) ಸ್ನಾನವನ್ನು ಮಾಡಬೇಕೆಂದೂ ಡಂಗುರದಂತೆ ಸಾರುತ್ತಿರಲು ಇವರನ್ನು ಪಲ್ಲಕ್ಕಿ ಮೊದಲಾದ ವೈಭವಗಳಿಂದ ಕರೆದು ಕೊಂಡು ಹೋಗುವುದಂತೂ ದೂರೇ ಉಳಿಯಿತು. ಅಂದ ಮೇಲೆ ವಿರಕ್ತರಾದವರು ವೀರಶೈವರ ಮನೆಯೊಳಗೆ ಹೋಗಿ ಪ್ರಸಾದವನ್ನು ಗ್ರಹಿಸುವ ಬಗೆ ಹೇಗೆ? ಯಾಕಂದರೆ—ವಿರಕ್ತರಿಗೆ ಭಿಕ್ಷಾನ್ನವೇ ವಿಧಿಸಲ್ಪಟ್ಟಿರುವುದಲ್ಲವೇ ?

ಗೃಹತ್ರಯೇಹ್ಯನ್ನಪಾನಂ ಯಾಚಮಾನೋ ಭವೇಚ್ಚ ಸಃ ।
ದತ್ತಂ ಚೇದಪಿ ಭುಂಜೀತ ನೋಚೇತ್ಕ್ಲೇಶಂ ನಕಾರಯೇತ್ ॥

ಇತಿ ಪಾಶುಪತತಂತ್ರೇ.

ನಿರ್ಗಚ್ಛೇದಟಿತುಂ ಭೈಕ್ಷ್ಯಂ ಪ್ರಣಮ್ಯ ಗುರುಮಾದಿತಃ ।
ಯದಿ ಭಿಕ್ಷಾಟನೇಚ್ಛಾಸ್ತಿ ತದಾ ಭಿಕ್ಷಾಟನಂ ಚರೇತ್ ॥
ಪರ್ಯಟೇಲ್ಲಿಂಗಿನಾಮೇವ ಭಕ್ತಾನಾಂ ಶಿವಯೋಗಿನಾಂ ।
ಯಾವದಿಚ್ಛನ್ ಗೃಹದ್ವಾರಂ ಪಕ್ವಂವಾಽಪಕ್ವಮೇವವಾ ॥
ನಿಬದ್ಧಪಾದಘಂಟೋವಾ ಘಂಟೋವಾ ಜಯಘಂಟಿಕಃ ।
ಶಂಖಶ್ಚ ಶೃಂಗಿನಾದೋವಾ ದಂಡಘಂಟೋಽಪಿ ಪರ್ಯಟನ್ ॥
ರುದ್ರಾಕ್ಷಾಣಾಂಚ ಮಾಲಾಭಿಃ ಕಂಥಾಕಂಬಲಭೂಷಿತಃ ।
ವಿಜ್ಞಾಪಯಿತ್ವಾ ಗೃಹಿಣಃ ಕಯಾಚಿಚ್ಛಬ್ದಸಂಜ್ಞಯಾ ।
ಭಿಕ್ಷೇತ್ಯಾಜ್ಞಾಪಯೇಲ್ಲಿಂಗೀ ಗುರುಧರ್ಮಮನುಸ್ಮರನ್ ॥

ಇತಿ ಪಾರಮೇಶ್ವರಾಗಮಾಷ್ಟಮಪಟಲೇ.

ಭಿಕ್ಷಾಚರ್ಯಂ ಚರೇತ್ । ಪಾಣಿಪಾತ್ರೇಣಾಶನಂಕುರ್ಯಾತ್ ।
ಔಷಧವದಶನಮಾಚರೇತ್ । ಔಷಧವದಶನಂ ಕುರ್ಯಾತ್ ॥
ಯಥಾಲಾಭಮಶ್ನೀಯಾತ್ಪ್ರಾಣಸಂಧಾರಣಾರ್ಥಂ ಯಥಾ
ಮೇಧೋವೃದ್ಧಿರ್ನಜಾಯತೇ ॥

ಇತಿ ಸನ್ಯಾಸೋಪನಿಷತ್ಪ್ರಥಮಾಧ್ಯಾಯೇ ॥

ಅಂದರೆ ವಿರಕ್ತನು ಮೂರೇ ಮನೆಗಳಲ್ಲಿ ಭಿಕ್ಷೆಯನ್ನು ಬೇಡಬೇಕು; ಕೊಟ್ಟರೆ ಉಣ್ಣಬೇಕು; ಕೊಡದಿದ್ದರೆ ದುಃಖವನ್ನು ಮಾಡಿಕೊಳ್ಳಬಾರದೆಂದು ಪಾಶುಪತತಂತ್ರವು ವಿಧಿಸುತ್ತದೆ. ವಿರಕ್ತನು ಭಿಕ್ಷಾಟನಕ್ಕೆ ಹೋಗಬೇಕಾದರೆ ಆದಿಯಲ್ಲಿ ತನ್ನ ಗುರುವನ್ನು (ಶಾಸ್ತ್ರಸಿದ್ಧವಾಗಿ ಜ್ಞಾನೋಪದೇಶಕ್ಕೆ ಅರ್ಹನಾದ ದೀಕ್ಷಾಗುರುವನ್ನು) ನಮಸ್ಕರಿಸಿ ಹೋಗಬೇಕು. ಕೇವಲ ಶಿವಭಕ್ತರ ಮನೆಗಳಿಗೆ ಹೋಗಬೇಕು. ಭಿಕ್ಷೆಗೆ ಹೋಗಬೇಕಾದರೆ ಕಾಲುಗಳಿಗೆ ಘಂಟೆಯನ್ನು ಕಟ್ಟಿಕೊಂಡೇ ಆಗಲಿ, ಕೈಯಲ್ಲಿ ಘಂಟೆಯನ್ನು ಹಿಡಿದುಕೊಂಡೇ ಆಗಲಿ, ಶಂಖವನ್ನು ತೆಗೆದುಕೊಂಡು ಊದುತ್ತಾಗಲಿ, ಕೋಡನ್ನು ಊದುತ್ತಾಗಲಿ ಅಥವಾ

ದಂಡಕ್ಕೆ ಘಂಟೆಯನ್ನು ಕಟ್ಟಿಕೊಂಡೇ ಆಗಲಿ ಈ ಪ್ರಕಾರದ ಯಾವು ದಾದರೊಂದು ಸಂಜ್ಞೆಯಿಂದ ಕೂಡಿ ಗೃಹಸ್ಥರನ್ನು ಎಚ್ಚರಿಸಿ, "ಭವತಿ ಭಿಕ್ಷಾಂದೇಹಿ" ಎಂದು ಪೂರ್ವದಲ್ಲಿ (ದೀಕ್ಷಾಕಾಲದಲ್ಲಿ) ತನ್ನ ಗುರುಗ ಳಾದ ದೀಕ್ಷಾಗುರುಗಳಿಂದ ಹೇಳಲ್ಪಟ್ಟ ಮಂತ್ರವನ್ನು ಸ್ಮರಣೆಗೆ ತಂದು ಉಚ್ಚರಿಸುತ್ತ ಭಿಕ್ಷೆಗೋಸ್ಕರ ಸಂಚರಿಸಬೇಕು. ಹೀಗೆ ಪಾರಮೇಶ್ವ ರಾಗಮವು ವಿಧಿಸುತ್ತದೆ. "ಗುರುಧರ್ಮಮನುಸ್ಮರನ್" ಎಂಬ ವಾಕ್ಯ ದಿಂದ ದೀಕ್ಷಾಗುರುಗಳೇ ವಿರಕ್ತನಿಗೆ ಗುರುಗಳಾಗುತ್ತಾರೆಂದು ಸ್ಪಷ್ಟ ವಾಗಿ ತೋರುತ್ತದೆ. ವಿರಕ್ತನು ಹಸ್ತವೆಂಬ ಪಾತ್ರೆಯಲ್ಲಿ ಭಿಕ್ಷೆಯನ್ನು ಬೇಡಬೇಕೆಂದೂ, ಬುದ್ಧಿಯು ಬೆಳೆಯದಹಾಗೆ ಔಷಧದಂತೆ ಸೂಕ್ಷ್ಮ ವಾಗಿ ಅನ್ನವನ್ನು ಗ್ರಹಿಸಬೇಕೆಂದೂ ಸನ್ಯಾಸೋಪನಿಷತ್ತು ವಿಧಿಸುತ್ತದೆ.

**ಚರೇನ್ಮಾಧುಕರೀಂ ಭಿಕ್ಷಾಮೇಕಾನ್ನಂ ಪರಿವರ್ಜಯೇತ್ ।**
**ಉಪವಾಸಾತ್ಪರಂ ಭೈಕ್ಷ್ಯಮೇಕಾನ್ನಂ ಗೃಹಿಣೋ ಮಲಂ ॥**

ಇತಿ ಶೈವರತ್ನಾಕರೇ.

**ಆಜ್ಯಂ ರುಧಿರಮಿವ ತ್ಯಜೇದೇಕತ್ರಾನ್ನಂ ಪಲಲಮಿವ ಗಂಧ ಲೇಪನಮಶುದ್ಧಲೇಪನಮಿವ ಕ್ಷಾರಮಂತ್ಯಜಮಿವ ॥**

ಇತಿ ಸನ್ಯಾಸೋಪನಿಷದಿ.

ವಿರಕ್ತನು ಕೇವಲ ಮಾಧುಕರೀಭಿಕ್ಷೆಯನ್ನೇ ಬೇಡಿ ಉಪ ಜೀವಿಸಬೇಕೆಂದೂ, ಒಂದೇ ಮನೆಯ ಅನ್ನವನ್ನು ಗ್ರಹಿಸಕೂಡ ದೆಂದೂ, ಒಂದೇ ಮನೆಯ ಅನ್ನವನ್ನು ಗ್ರಹಿಸಿದ್ದಾದರೆ ಅದು ಅನ್ನ ವಾಗದೆ ಆ ಗೃಹಸ್ಥನ ನರಕವನ್ನು ಗ್ರಹಿಸಿದಂತಾಗುವುದೆಂದೂ ಶೈವ ರತ್ನಾಕರವೆಂಬ ಗ್ರಂಥದಲ್ಲಿ ಆಗಮಪ್ರಮಾಣವುಂಟು ವಿರಕ್ತನು ತುಪ್ಪ ವನ್ನು ರಕ್ತದಂತೆಯೂ, ಒಂದೇ ಮನೆಯ ಅನ್ನವನ್ನು ಮಾಂಸದಂತೆ ಯೂ, ಗಂಧಲೇಪನವನ್ನು ಅಶುದ್ಧ (ಮಲ) ಲೇಪನದಂತೆಯೂ,

ಕ್ಷಾರವನ್ನು ಅಂತ್ಯಜ (ಹೊಲೆಯ) ನಂತೆಯೂ ತಿಳಿಯತಕ್ಕದ್ದೆಂದು ಸನ್ಯಾಸೋಪನಿಷತ್ತು ವಿಧಿಸುತ್ತದೆ.

" ರಾಜಾನ್ನಂ ನರಕಂಭವೇತ್ " ಎಂದರೆ ವಿರಕ್ತನು ರಾಜಾನ್ನವನ್ನು ಗ್ರಹಿಸಿದ್ದಾದರೆ ನರಕವನ್ನು ಭುಂಜಿಸಿದಂತಾಗುತ್ತದೆಂದು ವೇದಾಂತಸಾರವೀರಶೈವಚಿಂತಾಮಣಿಯು ಸಾರುತ್ತದೆ.

ಘೃತಂ ಶ್ವಮೂತ್ರಸದೃಶಂ ಮಧು ಸ್ಯಾತ್ಸುರಯಾ ಸಮಂ ।
ತೈಲಂ ಸೂಕರಮೂತ್ರಂ ಸ್ಯಾತ್ಸೂಪಂ ಲಶುನಸಂಯುತಂ ॥
ಮಾಷಾಪೂಪಾದಿ ಗೋಮಾಂಸಂ ಕ್ಷೀರಂ ಮೂತ್ರಸಮಂ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಘೃತಾದೀನ್ ವರ್ಜಯೇದ್ಯತಿಃ ॥

ಅಂದರೆ ವಿರಕ್ತನು ತುಪ್ಪವನ್ನು ನಾಯಿಯ ಉಚ್ಚಿಗೆ ಸಮಾನವಾಗಿಯೂ, ಜೇನುತುಪ್ಪವನ್ನು ಮದ್ಯಕ್ಕೆ ಸಮಾನವಾಗಿಯೂ, ಎಣ್ಣೆಯನ್ನು ಹಂದಿಯ ಮೂತ್ರಕ್ಕೆ ಸಮಾನವಾಗಿಯೂ, ಬೆಳ್ಳುಳ್ಳಿಯಿಂದ ಕೂಡಿದ ಬೇಳೆ, ಗಾರಿಗೆ, ಹೋಳಿಗೆ ಮೊದಲಾದವುಗಳನ್ನು ಗೋಮಾಂಸಕ್ಕೆ ಸಮಾನವಾಗಿಯೂ, ಹಾಲನ್ನು ಮೂತ್ರಕ್ಕೆ ಸಮಾನವಾಗಿಯೂ ತಿಳಿಯತಕ್ಕದ್ದು. ಆದಕಾರಣ ವಿರಕ್ತನು ಘೃತ ಮೊದಲಾದ ಪದಾರ್ಥಗಳನ್ನು ಸೇವಿಸಕೂಡದು. ಸೇವಿಸಿದ್ದಾದರೆ ಶ್ವಮೂತ್ರ ಮದ್ಯ ಸೂಕರಮೂತ್ರ ಗೋಮಾಂಸ ಮೂತ್ರಗಳನ್ನು ಸೇವಿಸಿದಂತಾಗುತ್ತದೆಂದು ಸನ್ಯಾಸೋಪನಿಷತ್ತು ವಿಧಿಸುತ್ತದೆ. ಹೀಗಿದ್ದು ವಿರಕ್ತನೇ ಜಂಗಮನೆಂದು ಅಂದದ್ದಾದರೆ, ಶಿಷ್ಯರು ತಮ್ಮ ತಮ್ಮ ಮನೆಗಳಲ್ಲಿ ಕರೆದುಕೊಂಡು ಹೋಗಿ ಪಕ್ವಾನ್ನಗಳನ್ನು ನೀಡುವ ಬಗೆ ಹೇಗೆ? ನೀಡಿದ್ದಾದರೆ ನೀಡಿದವನು ನರಕವನ್ನೇ ನೀಡಿದಂತಾಗುತ್ತದೆ; ಅವನಾದರೂ ನರಕವನ್ನೇ ತಿಂದಂತಾಗುತ್ತದೆ. ಅಂದಮೇಲೆ ಎಷ್ಟು ದೋಷವು ಬರುತ್ತದೆನ್ನುವದನ್ನು ವಾಚಕರೇ ವಿಚಾರಿಸತಕ್ಕದ್ದು. ಆದ

ಕಾರಣ ವಿರಕ್ತರು ಜಂಗಮರಾಗುವದಿಲ್ಲ; ಆದರೆ ಶಾಸ್ತ್ರಸಿದ್ಧ ಗುರುಸ್ಥಲದ ಚರಮೂರ್ತಿಗಳೇ ಜಂಗಮುಪದವಾಚ್ಯರಾಗುತ್ತಾರೆ.

ಶಂಖಚಾಮರಭೇರ್ಯಾದೀನ್ ಛತ್ರಂ ಚಂದ್ರಸಮಪ್ರಭಂ ।
ಶಿಬಿಕಾಂ ವೈಜಯಂತೀಂಚ ಕಿರೀಟಂ ಸಿಂಹವಿಷ್ಟರಂ ॥
ಪಟ್ಟಾಭಿಷೇಕಯುಕ್ತಾಯ ಮಹೇಶಾಯ ಸಮರ್ಪಯೇತ್ ॥

ಇತ್ಯಾದಿ ಪ್ರಮಾಣಬಲದಿಂದ ಇವರಿಗೆ ವಿರಕ್ತರಂತೆ ಆಂದೋಲಿಕಾರೋಹಣ ಮೊದಲಾದವುಗಳು ನಿಷೇಧಿಸಲ್ಪಟ್ಟಿಲ್ಲ. ಆದ್ದರಿಂದ ಈ ಪೂಜ್ಯಪಾದರೇ ಜಂಗಮರೆಂದು ಸಿದ್ಧಮಕ್ಕುಂ.

ಇನ್ನೊಂದು ಪಕ್ಷವೇನಂದರೆ,—

“ ಜಂಗಮ್ಯಂತ ಇತಿ ಜಂಗಮಾಃ ” ಎಂಬ ವ್ಯುತ್ಪತ್ತಿಗನುಸರಿಸಿ ಜಂಗಮರೆಂದರೆ ಸಂಚರಿಸುವವರೆಂದು ಅರ್ಥವಾಗುತ್ತದೆ. ಆದರೆ ಇವರು ಸಕಾರಣವಾಗಿ ಸಂಚರಿಸುವವರೋ? ಅಥವಾ ನಿಷ್ಕಾರಣವಾಗಿ ಸಂಚರಿಸುವವರೋ? ಎಂಬ ಪ್ರಶ್ನವು ಉಪಸ್ಥಿತವಾಗುತ್ತದೆ. ನಿಷ್ಕಾರಣವಾಗಿ ಹುಚ್ಚರಂತೆ ತಿರುಗುವವರು ಹೇಗೆ ಪೂಜ್ಯರಾಗುವರು? ಎಂದೂ ಆಗುವುದಿಲ್ಲ. ಸಕಾರಣವಾಗಿ ಸಂಚರಿಸುವವರೇ ಪೂಜ್ಯಜಂಗಮಪದವಾಚ್ಯರಾಗುತ್ತಾರೆ. ಆ ಕಾರಣಗಳು ಯಾವುವೆಂದರೆ—ಪರಮತಖಂಡನಪೂರ್ವಕ ಸ್ವಸಿದ್ಧಾಂತಸ್ಥಾಪನ, ದೀಕ್ಷಾ-ಶಿಕ್ಷಾ-ರಕ್ಷಣ ಉಪದೇಶಾನುಗ್ರಹ ಇವೇ ಮೊದಲಾದವುಗಳಿರುತ್ತವೆ. ಈ ಎಲ್ಲ ಕಾರಣಗಳು ವೀರಶೈವ ಧರ್ಮಶಾಸ್ತ್ರಕ್ಕನುಸರಿಸಿ ವಿರಕ್ತನಿಗೆ ನಿಷೇಧಿಸಲ್ಪಟ್ಟಿರುತ್ತವೆ.

ನಿರಾಭಾರಾ ವೀರಶೈವಾಃ ಸರ್ವಸಂಗವಿವರ್ಜಿತಾಃ ।
ದಂಡಖಂಡನಕರ್ತೃತ್ವಂ ನಾಸ್ತಿ ತೇಷಾಂ ಕದಾಚನ ॥
ರುದ್ರಾಣಿ ವೀರಶೈವಾನಾಂ ಶಿಕ್ಷಣೇ ರಕ್ಷಣೇ ತಥಾ ।
ಆಚಾರಪ್ರಾಯಶ್ಚಿತ್ತಾದೌ ಶುಭಾಶುಭವಿಧೌ ಶಿವೇ ॥

ಕರ್ತಾರೋ ನಭವಂತ್ಯೇತೇ ಪಂಚಮುದ್ರಾನ್ವಿತಾ ಅಪಿ ।
ಬಲಾದಪಿಚ ಕುರ್ವೀತ ಸ ಚಂಡಾಲೋ ಭವಿಷ್ಯತಿ ॥

ಇತಿ ಪಾಶುಪತಾಗಮೇ—ಅಂದರೆ ವಿರಕ್ತನು ಸರ್ವಸಂಗಪರಿತ್ಯಾಗ ಮಾಡಿರೋಣದರಿಂದ ಅವನಿಗೆ ದಂಡನ ಖಂಡನ ಕರ್ತೃತ್ವವು ಎಂದೂ ಇಲ್ಲ. ನಿರಕ್ತನು ಶಿಕ್ಷಣರಕ್ಷಣಾಚಾರ ಪ್ರಾಯಶ್ಚಿತ್ತ ಶುಭಾಶುಭ ವಿಧಿ ಮೊದಲಾದವುಗಳನ್ನು ಮಾಡಬಾರದು. ಒಂದುವೇಳೆ ಬಲಾತ್ಕಾರದಿಂದ ಮಾಡಿದ್ದಾದರೆ ಅವನು ಚಂಡಾಲನಾಗುತ್ತಾನೆಂದು ಪಾಶುಪತಾಗಮವು ವಿಧಿಸುತ್ತದೆ.

ಅನುಗ್ರಹಂ ಪರಿಪ್ರಶ್ನಂ ವೃಥಾ ಜಲ್ಪೋನ್ಯ ಉಚ್ಯತೇ ।
ಏಕಾನ್ನಂ ಮದಮಾತ್ಸರ್ಯಂ ಗಂಧಪುಷ್ಪವಿಭೂಷಣಂ ॥
ತಾಂಬೂಲಾಭ್ಯಂಜನೇ ಕ್ರೀಡಾ ಭೋಗಾಕಾಂಕ್ಷಾರಸಾಯನಂ ।
ಕತ್ಥನಂ ಕುತ್ಸನಂ ಸ್ವಸ್ತಿಜ್ಯೋತಿಶ್ಚಕ್ರಯವಿಕ್ರಯಂ ॥
ತ್ಯಕ್ತಂ ಸನ್ಯಾಸಯೋಗೇನ ಗೃಹಧರ್ಮಾದಿಕಂ ವ್ರತಂ ॥

ಇತಿ ಸನ್ಯಾಸೋಪನಿಷದಿ

ಅಂದರೆ ವಿರಕ್ತನು ಅನುಗ್ರಹ ಆಶೀರ್ವಾದ ಮೊದಲಾದವುಗಳನ್ನು ಮಾಡುವುದನ್ನು ಬಿಡತಕ್ಕದ್ದೆಂದು ಸನ್ಯಾಸೋಪನಿಷತ್ತು ವಿಧಿಸುತ್ತದೆ. ಈ ಎಲ್ಲ ಅಭಿಪ್ರಾಯಗಳಿಂದ ವಿರಕ್ತನು ನಿಷ್ಕಾರಣವಾಗಿ ಸಂಚರಿಸುವನೆಂದು ಶಾಸ್ತ್ರಸಿದ್ಧವಾಗುವುದೇ ಹೊರತು ಸಕಾರಣವಾಗಿ ಸಂಚರಿಸುತ್ತಾನೆಂದು ಸಿದ್ಧವಾಗುವುದಿಲ್ಲ. ಅಂದಮೇಲೆ ಪರಮತ ಖಂಡನಪೂರ್ವಕ ಸ್ವಮತಸಿದ್ಧಾಂತವನ್ನು ಸ್ಥಾಪನ ಮಾಡಬೇಕೆಂಬ ತತ್ತ್ವವುಳ್ಳ ಅಷ್ಟಾವರಣಾಂತರ್ಗತ ಜಂಗಮಪದವಾಚ್ಯನು ವಿರಕ್ತನು ಎಂದೂ ಆಗುವುದಿಲ್ಲ. ಆದರೆ ಶಾಸ್ತ್ರಸಿದ್ಧರಾದ ಗುರುಸ್ಥಲದ ಚರಮೂರ್ತಿಗಳೇ ಜಂಗಮಪದವಾಚ್ಯರಾಗುತ್ತಾರೆ. ಯಾಕಂದರೆ—ಅವರು ತಮ್ಮ

ಯಾವತ್ತು ಶಿಷ್ಯಕೋಟಿಯಲ್ಲಿ ಸ್ವಸಿದ್ಧಾಂತವನ್ನು ಸ್ಥಾಪನಮಾಡುವು ದಕ್ಕಾಗಿಯೂ, ದೀಕ್ಷಾ ಶಿಕ್ಷಣ ರಕ್ಷಣ ದಂಡಸಖಂಡನಾಚಾರಪ್ರಾಯ ಶ್ಚಿತ್ತಜ್ಞಾನೋಪದೇಶ ಮೊದಲಾದವುಗಳನ್ನು ಮಾಡುವುದಕ್ಕಾಗಿಯೂ ಸಂಚರಿಸುತ್ತಿರುವುದರಿಂದ ಇವರ ವಿಷಯದಲ್ಲಿ ಧರ್ಮಶಾಸ್ತ್ರವು ಮುಕ್ತ ಕಂಠವಾಗಿ ಕೂಗುತ್ತದೆ. ಇದು ಜಗತ್ತಿನಲ್ಲಿ ಯೋಗರೂಢಿಗಳಿಂದ ಪ್ರಸಿದ್ಧವೇ ಇದೆ. ಇದೇ ತತ್ತ್ವವನ್ನು ಕುರಿತು ವೀರಶೈವಸದಾಚಾರ ಸಂಗ್ರಹದಲ್ಲಿ ಹೇಳುವುದೇನೆಂದರೆ,—

**ಶಿವೋತ್ಕರ್ಷಂ ವೀರಶೈವಮತಂ ಸ್ವಾಚಾರಮುತ್ತಮಂ ।**
**ಸ್ಥಾಪಯ ತ್ವಂ ಯಥಾಶಾಸ್ತ್ರಂ ಚರಮೂರ್ತೀನ್ ಪ್ರತೋಷಯ॥**
**ಸಂಚಾರಂ ಕುರು ಸರ್ವತ್ರೇತ್ಯಾದಿಶ್ಯ ಗುರುರಾದರಾತ್ ॥**

ಗುರುವು ಜಂಗಮಾಧಿಕಾರವನ್ನು ಕೊಡುವ ಕಾಲಕ್ಕೆ, "ಎಲೈ, ಚರಮೂರ್ತಿಯೇ! ನೀನು ಸರ್ವತ್ರ ಸಂಚಾರಮಾಡಿ ವೀರಶೈವಮತ ವನ್ನೂ ಆಚಾರಾದಿಗಳನ್ನೂ ಯಥಾಶಾಸ್ತ್ರವಾಗಿ ಸ್ಥಾಪಿಸು ; ಹಾಗೂ ಚರಮೂರ್ತಿಗಳನ್ನು ಸಂತೋಷಗೊಳಿಸು" ಎಂದು ಉಪದೇಶಿಸಿ ಅಧಿ ಕಾರವನ್ನು ಕೊಡುತ್ತಾನೆಂದು ಪ್ರತಿಪಾದಿಸಲ್ಪಟ್ಟಿರುತ್ತದೆ. ಅಂದ ಮೇಲೆ ಚರಮೂರ್ತಿಗಳೇ ಜಂಗಮರಲ್ಲದೆ ವಿರಕ್ತರು ಆಗುವುದಿಲ್ಲವೆಂದು ಸಿದ್ಧಾಂತವು. ಇದೇ ತತ್ತ್ವವನ್ನನುಸರಿಸಿ ಪರಮೇಶ್ವರನ ಆಜ್ಞೆಯಿಂದ ಭೂಲೋಕದಲ್ಲಿ ವೀರಶೈವ ಸಿದ್ಧಾಂತವನ್ನು ಸ್ಥಾಪನಮಾಡುವುದಕ್ಕೋ ಸ್ಕರ ಅವತಾರವನ್ನೆತ್ತಿಕೊಂಡುಬಂದ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರು ಎಲ್ಲಾ ಲೋಕಗಳಲ್ಲಿ ಸಂಚರಿಸಿ, ಸ್ವಮತ ಸಿದ್ಧಾಂತ ವನ್ನು ಸ್ಥಿರಗೊಳಿಸಿದರು. ಶ್ರೀ ರೇಣುಕಾಚಾರ್ಯರು ಭೂತಲದಲ್ಲಿ ೧೪೦೦ ವರ್ಷಗಳವರೆಗೆ ಸಂಚರಿಸಿ, ವೀರಶೈವ ಸಿದ್ಧಾಂತವನ್ನು ನೆಲೆಗೊಳಿಸಿ, ಕೊಲ್ಲಿಪಾಕಿ ಸೋಮೇಶ್ವರಲಿಂಗದಲ್ಲಿ ಅಡಗುವ ಕಾಲಕ್ಕೆ ಸೋಮೇಶ್ವರನ ಮುಂದೆ ನಿಂತು—

ಪಾಹಿ ಮಾಂ ಪರಮೇಶಾನ ಪಾಹಿ ಮಾಂ ಪಾರ್ವತೀಪತೇ ।
ತ್ವದಾಜ್ಞಯಾ ಮಯೈತಾವತ್ಕಾಲಮಾತ್ರಂ ಮಹೀತಲೇ ॥
ಅಚಾರಿ ಭವದುಕ್ತಾನಾಮಾಗಮಾನಾಂ ಪ್ರಸಿದ್ಧಯೇ ।
ಅತಃಪರಂ ಸ್ವರೂಪಂ ತೇ ಪ್ರಾಪ್ತುಕಾಮೋಽಸ್ಮಿ ಶಂಕರ ॥

ಇತಿ ಸಿದ್ಧಾಂತಶಿಖಾಮಣೌ.

ಎಂದು ಸ್ತುತಿಸಿರುತ್ತಾರೆ. ಆದಕಾರಣದಿಂದಲೇ ವೀರಮಾಹೇಶ್ವರ ತಂತ್ರವು "ಭೂರುದ್ರಾ ಜಂಗಮಾ ಲೋಕೇ ರೇಜಿರೇ ರೇಣುಕಾದಯಃ" ಎಂದು ಮುಕ್ತಕಂಠದಿಂದ ಸಾರುತ್ತದೆ ಈ ಪ್ರಕಾರವಾಗಿ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಸರ್ವತ್ರ ಸಂಚರಿಸಿ ಸ್ವಮತಸಿದ್ಧಾಂತವನ್ನು ಸ್ಥಾಪಿಸಿ ಗುರುರೂಪಿಗಳೆಂದೂ, ಲಿಂಗರೂಪಿಗಳೆಂದೂ, ಜಂಗಮರೂಪಿಗಳೆಂದೂ ಜಗತ್ತಿನಲ್ಲಿ ವಿಖ್ಯಾತಿಯನ್ನು ಹೊಂದಿದರು. ಈ ಸರ್ವತತ್ತ್ವಗಳಿಂದ ಗುರುಸ್ಥಲದ ಚರಮೂರ್ತಿಗಳೇ ಅಷ್ಟಾವರಣಾಂತರ್ಗತ ಜಂಗಮರೆಂದು ಘಂಟಾಘೋಷವಾದ ಸಿದ್ಧಾಂತವು.

ಕೆಲವು ಗ್ರಂಥಕಾರರು ಜಂಗಮಪರಪದ್ಯಗಳನ್ನು ನಿರಾಭಾರಿ ವೀರಶೈವರಲ್ಲಿ ಸೇರಿಸಿದ್ದಾರೆ. ಪೂರ್ವಾಪರವಾಗಿ ವಿಚಾರಮಾಡಿ ನೋಡುತ್ತಿರಲಿಕ್ಕೆ ಇದು ಅತ್ಯಂತ ದೋಷಯುಕ್ತವಾದದ್ದೆಂದು ಕಂಡುಬರುತ್ತದೆ. ರಾ|| ಬ|| ವಾರದ ಮಲ್ಲಪ್ಪನವರಿಂದ ಕನ್ನಡಕ್ಷರಗಳಿಂದ ಮುದ್ರಿತವಾದ ವಿರಕ್ತೋತ್ಪತ್ತಿಕ್ರಿಯಾಲಕ್ಷಣವೆಂಬ ಗ್ರಂಥದ ಪ್ರಸ್ತಾವನೆಯಲ್ಲಿ "ವಿರಕ್ತಲಕ್ಷಣಗಳು ವಿಶೇಷವಾಗಿ ನಮಗೆ ದೊರೆಯದೆ ಇದ್ದುದರಿಂದ ಜಂಗಮಲಕ್ಷಣಗಳನ್ನೇ ಇವರಿಗೆ ಸಂಬಂಧಿಸಿರುತ್ತೇವೆ" ಎಂಬ ಅಭಿಪ್ರಾಯವು ತೋರಿಸಲ್ಪಟ್ಟಿರುತ್ತದೆ. ಇರಲಿ;

ವೀರಶೈವ ಧರ್ಮಶಾಸ್ತ್ರವಿರುದ್ಧವಾಗಿ ಕೇವಲ ಜಂಗಮರೆಂದು ಹೆಸರನ್ನಿಟ್ಟುಕೊಂಡು ಆಚರಿಸುವ ವಿರಕ್ತಮಹಾಶಯರ ವಿಷಯದಲ್ಲಿ ತೋಂಟದಾರ್ಯರು ತಮ್ಮಿಂದ ರಚಿಸಲ್ಪಟ್ಟ ವೀರಶೈವಪ್ರದೀಪಿಕೆಯೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೀಗೆ ಬರೆದಿರುತ್ತಾರೆ. ಅದೇನೆಂದರೆ—

" ನಿತ್ಯಾನಂದಸ್ವರೂಪನಾದ ಪರಾಪರಮುಕ್ತಿಪ್ರದನಾದ ಸರ್ವೋತ್ತಮನಾದ ಯಾವ ಪರಶಿವಮೂರ್ತಿಯಂ ಸರ್ವಕಾಲದಲ್ಲಿ ಧರಿಸಿ ಪೂಜಿಸಿ ವಂದಿಸಿಯುಂ ಸರ್ವೋತ್ಕೃಷ್ಟನೆಂದು ತಿಳಿಯದೆ ಆ ಪರಶಿವಮೂರ್ತಿಗಿಂತಲೂ ತಾವೇ, ಅಧಿಕರೆಂದು ತಿಳಿದು ಪರಶಿವನ ಶ್ರೀ ಪಾದತೀರ್ಥದಲ್ಲಿ ಪರಾಙ್ಮುಖರಾಗಿ ಸ್ವಪಾದಪ್ರಕ್ಷಾಲನೋದಕದಲ್ಲಿಯೇ ಭಕ್ತಿಯುಳ್ಳ ಇಂಥ ಅಜ್ಞಾನಿಗಳಾದ ಶಿವದ್ರೋಹಿಗಳಾದ ಸ್ವೇಚ್ಛಾಚಾರಿಗಳಾದ ದುರ್ಮಾರ್ಗಪ್ರವಿಷ್ಟರಾದ ನಾಸ್ತಿಕರಾದ ನರಕಭಾಜನರಾದ ಶಾಪದಗ್ಧರಾದ ಪಾಪಾತ್ಮರುಗಳಾದ ಜಂಗಮಾಭಿಧಾನಮಾತ್ರವುಳ್ಳ ಕೆಲವು ವೇಷಧಾರಿಗಳು.

ಶುಕ್ಲದಂತಾ ಜಿತಾಕ್ಷಾಶ್ಚ ಮುಂಡಾಃ ಕಾಷಾಯಧಾರಿಣಃ |
ಶೂದ್ರಧರ್ಮಂ ಚರಿಷ್ಯಂತಿ ಬಹವೋಽಸ್ಮಿನ್ ಕಲೌಯುಗೇ ||

ಇತ್ಯಾದಿ ಲಿಂಗಪುರಾಣ ವಚನದಿಂ—

ದುರ್ಭೋಜನ ದುರಾಲಾಪದುಷ್ಪ್ರತಿಗ್ರಹತತ್ಪರಾಃ |
ದುರ್ವಿಹಾರದುರಾಚಾರವೃಥಾಗರ್ವವಿದೂಷಿತಾಃ ||
ಮಾತಾಪತ್ಯಂ ಚ ಯತಯಃ ಕರಿಷ್ಯಂತಿ ಧನಾಶಯಾ |
ಗ್ರಾಮಣ್ಯನಿರತಾ ಯಂತ್ರಮಂತ್ರತಂತ್ರವಿಶಾರದಾಃ ||
ರಂಡೋಪದೇಶನಿರತಾಸ್ತತ್ಸಂಭಾಷಣತತ್ಪರಾಃ |
ಸರ್ವೇಷಾಮುಪದೇಷ್ಟಾರೋ ವೈರಾಗ್ಯೇಣ ವಿವರ್ಜಿತಾಃ ||
ಯಾಚಕಾಶ್ಚ ಭವಿಷ್ಯಂತಿ ಯತಯಃ ಕಾಂಚನಾಶಯಾ |
ಸರ್ವತ್ರ ವಿಚರಿಷ್ಯಂತಿ ತೃಷ್ಣಯಾ ನಗರಾದಿಷು ||
ವಯಸಾ ಪಯಸಾ ದಧ್ನಾ ಕ್ಷೀರಶಾಲ್ಯೋದನೇನ ಚ |
ಯತಿರೇತೈರನುದಿನಂ ಪ್ರಮತ್ತಃ ಪತಿತೋ ಭವೇತ್ ||
ಕಾಷಾಯಧಾರಿಣಃ ಕೇಚಿಲ್ಲಂಪಟಾ ವಿಷಯೇಷ್ವಿಹ |
ಶಿಶ್ನೋದರಪರಾಶ್ಚಾನ್ಯೇ ಮುಂಡಿನೋ ಲೋಕವಂಚಕಾಃ ||
ಕಪಟಾ ನಾಸ್ತಿಕಾಃ ಕೇಚಿದ್ವ್ರತಾವ್ಯೈ ವೇಷಧಾರಿಣಃ |
ರಾಜಸೇವಾಂ ಪ್ರಕುರ್ವಂತಿ ಪಿಬಂತಿ ರುಧಿರಂ ಪರೇ |
ತೇಷಾಂ ಸಂದರ್ಶನಾದೇವ ನರಃ ಕಿಲ್ಬಿಷಮಾಪ್ನುಯಾತ್ ||

ಇತ್ಯಾದಿ ವಚನಗಳಿಂದೀ ಲೋಕದೊಳ್ ಪಾಪಿಷ್ಠರಾದನೇಕಮಂದಿ ಯತಿಗಳು ಶುಕ್ಲದಂತಗಳುಳ್ಳವರಾಗಿ ಸ್ವಚ್ಛಂದನಾದಿ ವಿಷಯಗಳಲ್ಲಿ ಆಸಕ್ತಿಯುಳ್ಳವರಾಗಿ

ಮುಂಡಿತಗಳಾದ ಶಿರಸ್ಸುಗಳುಳ್ಳವರಾಗಿ ಕಾಷಾಯವಸ್ತ್ರಗಳಂ ಧರಿಸಿಕೊಂಡು ಈ ಕಲಿಯುಗದೊಳ್ ಹೇಯವಾದ ಶೂದ್ರಧರ್ಮಂಗಳನ್ನಾಚರಿಸುವರು. ಮತ್ತಂ— ದುರ್ಭೋಜನದಲ್ಲಿಯೂ ದುರಾಲಾಪಗಳಲ್ಲಿಯೂ ದುಷ್ಪ್ರತಿಗ್ರಹದಲ್ಲಿಯೂ ಅತ್ಯಂತಾ ಸಕ್ತಿಯುಳ್ಳವರಾಗಿ ದುರ್ವಿಹಾರಗಳಂ ಮಾಡುತ್ತ ದುರಾಚಾರಗಳಿಂ ನಡೆಯುತ್ತ ವ್ಯರ್ಥವಾದ ಗರ್ವದಿಂ ಕೂಡಿ ಬಹಳ ನಿಂದ್ಯರಾಗಿ ಅಧಿಕವಾದ ಧನಾಶೆಯಿಂದತ್ಯಂತ ವಿಗರ್ಹಿತವಾದ ಮಾತಾಪತ್ಯವನ್ನಂಗೀಕರಿಸುವರು. ಮತ್ತಂ—ಗ್ರಾಮಣ್ಯದಲ್ಲಿ ತತ್ಪರ ರಾಗಿ ಮಂತ್ರ ಯಂತ್ರ ತಂತ್ರಂಗಳಂ ಕಲಿತು ಮುಂಡೆಯರಿಗುಪದೇಶವಂ ಮಾಡುತ್ತ ಅವರ ಸಂಗಡ ಸರಸಸಲ್ಲಾಪಂಗಳಂ ಗೈಯುತ್ತ ಅದರಿಂದಲೇ ಜೀವಿಸುವರು. ಮತ್ತಂ ಸ್ವಯಂವೈರಾಗ್ಯದಿಂ ಹೀನರಾಗಿ ಪರರಿಗೆ ಮಾತ್ರ ವೈರಾಗ್ಯಮಂ ಉಪದೇಶಿಸುತ್ತ ದ್ರವ್ಯದಲ್ಲಿ ಅಧಿಕವಾದ ಆಶೆಯಿಂ ಕಂಡ ಕಂಡ ಜನರಂ ಯಾಚಿಸುವರು. ಮತ್ತಂ ಅಪರಿಮಿತವಾದ ತೃಷ್ಣೆಯೆಂಬ ಪಿಶಾಚಿಯಿಂದಾಕ್ರಮಿಸಲ್ಪಟ್ಟವರಾಗಿ ಗಮ್ಯಾಗಮ್ಯ ಪ್ರದೇಶಗಳಂ ವಿಚಾರಿಸದೆ ಸರ್ವತ್ರ ಸಂಚರಿಸುವರು. ಮತ್ತಂ ಪ್ರತಿದಿನವು ದಿವ್ಯ ವಾದ ದಧಿ ಘೃತ ಕ್ಷೀರ ಶಾಲ್ಯೋದನಗಳಂ ಸೇವಿಸಿ ಯೌವನದ ಕೊಬ್ಬಂ ತಡೆಯ ಲಾರದೆ ಮತ್ತರಾಗಿ ಮನಸ್ಸು ಬಂದಂತೆ ಪ್ರವರ್ತಿಸಿ ಅತ್ಯಂತವಾಗಿ ಪಾತಿತ್ಯಮಂ ಪಡೆಯುವರು. ಮತ್ತಂ ಕೆಲವರು ಕಾಷಾಯಧಾರಿಗಳು ವಿಷಯಲಂಪಟರಾಗಿ ಶಿಶ್ನೋ ದರಪರಾಯಣರಾಗಿ ವೇದಶಾಸ್ತ್ರಂಗಳಲ್ಲಿ ಸಿದ್ಧಾಂತಿಸಲ್ಪಟ್ಟ ಪುಣ್ಯಪಾಪಂಗಳನ್ನೂ ಪರಲೋಕವನ್ನೂ ಸಹ ಅಪಲಪಿಸುತ್ತ ಶುದ್ಧನಾಸ್ತಿಕರೇ ಆಗಿ ಜನರಂ ಮೋಹಪಡಿಸು ವುದಕ್ಕೋಸ್ಕರ ಅನ್ಯಾಯವಾಗಿ ವಿರಕ್ತ ವೇಷಂಗಳಂ ಧರಿಸಿ ಜೀವನಮಂ ಮಾಡುತ್ತ ನರಕಗಾಮಿಗಳೇ ಆಗುವರು, ಆದುದರಿಂದ ಯೋಗ್ಯರಾದ ಸತ್ಪುರುಷರು ಇಂಥ ನೀಚರಾದ ಜನರನ್ನು ಕಣ್ಣಿನಿಂದಲೂ ಸಹ ನೋಡಬಾರದು. ನೋಡಿದರೆ ನರಕವನ್ನೇ ಪಡೆಯುವರು. ಎಂಬ ಸ್ಕಾಂದಾದಿತ್ಯಪುರಾಣ ವಚನಾರ್ಥಗಳಿಗೆ ವಿಷಯರಾಗಿ ಶಾಸ್ತ್ರ ಪ್ರಮಾಣವಿಲ್ಲದೆ ಅಶಾಸ್ತ್ರೀಯವಾಗಿ ಪಾಪಹೇತುವಾಗಿ ತಾವು ಆಚರಿಸುವದಲ್ಲದೆ ತಾವು ಆಚರಿಸುವ ದುರಾಚಾರಂಗಳಂ ಶಿಷ್ಟಾಚಾರಗಳೆಂದು ಗುರುಗಳು ಅನುಸರಿಸಿದ ರೆಂದು ತಮ್ಮ ಗುರುಗಳ ಅಜ್ಞತ್ವವಂ ಪ್ರಕಾಶವಾಗಿ ತಿಳಿಸುವಂಥ ಗುರುದ್ರೋಹಿಗಳು "ಯಃಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ | ನಾಸೌ ಸಿದ್ಧಿಮವಾಪ್ನೋತಿ ನಸುಖಂ ನಪರಾಂಗತಿಂ || ಎಂಬಂತೆ ಭಗವದ್ವಚನವಂ ಸಾರ್ಥಕವನ್ನಾಗಿ ಮಾಡುವರು. ಮತ್ತೊಂದು ಪ್ರಕಾರ ಕಾರಣಮುಂಟದೆಂತನೆ—ಶಿವನು ಈ ಕಲಿಯುಗದೊಳಗೆ ಶಿವ

ದ್ರೋಹಿಗಳಂ ಪುಟ್ಟಿಸಿ ಅವರುಗಳಿಂದ ಅಸಂಖ್ಯಾತ ದುಷ್ಕರ್ಮಗಳಂ ಮಾಡಿಸಿ ಮಹಾ ದುಃಖಪ್ರದವಾದ ನರಕವನ್ನೈದಿಸುವನೆಂದು ಆದಿಕ್ಯಪುರಾಣೋಕ್ತವಾದ ಶಿವಸಹಸ್ರ ನಾಮದ ಏಳುನೂರು ಅರವತ್ತೆರಡನೆಯದಾದ "ಶಿಷ್ಯಾಯನಮಃ" ಎಂಬ ನಾಮದ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿರುವುದರಿಂದ ನಿಶ್ಚಯವೆಂದು ತಿಳಿಯ ತಕ್ಕದ್ದು."

ಇವೇ ಮೊದಲಾದ ಪರಮಪ್ರಮಾಣೀಭೂತವಾಕ್ಯಗಳಿಂದ ವಿರಕ್ತರಲ್ಲಿ ಅಷ್ಟಾವರಣಾಂತರ್ಗತ ಜಂಗಮತ್ವವು ಖಂಡನವಾಗಿ ಗುರು ಸ್ಥಲದ ಚರಮೂರ್ತಿಗಳಲ್ಲಿ ಶಾಸ್ತ್ರರೀತಿಯಂತೆ ಸಿದ್ಧವಾಗುತ್ತದೆ. ಇರಲಿ; ನಮ್ಮ ಈ ಶಾಸ್ತ್ರಿಮಹಾಶಯರು ಜಂಗಮರ ವಿಷಯದಲ್ಲಿ "ಚರ ಮೂರ್ತೇರ್ಗುರುತ್ವಂತು ಗುರೋರಪ್ಯಧಿಕಂಭವೇತ್" ಇತ್ಯಾದ್ಯನೇಕ ಪ್ರಮಾಣಗಳಿಂದ ಜಂಗಮಾಧಿಕ್ಯವನ್ನು ತೋರಿಸಿದ್ದು ಯಥಾರ್ಥವೇ ಇರುತ್ತದೆ. ಅವರು ಜಂಗಮರೆಂದರೆ ವಿರಕ್ತರೆಂದು ತಿಳಿದುಕೊಂಡದ್ದು ಇಷ್ಟೇ ತಪ್ಪು ಇರುತ್ತದೆ. ಮತ್ತೇನೂ ಇಲ್ಲ. ಗುರುಗಳಿಗಿಂತ ಗುರುತ್ವ ವಿಶಿಷ್ಟಚರಮೂರ್ತಿಗಳಲ್ಲಿ (ಜಂಗಮಮೂರ್ತಿಗಳಲ್ಲಿ) ಇಷ್ಟು ಆಧಿಕ್ಯವನ್ನು ಶಾಸ್ತ್ರಕಾರರು ಏಕೆ ಕೊಟ್ಟಿರುವರೆಂದರೆ—

ಚರಮೂರ್ತಿಗಳು ಸಕಲ ದೇಶಗಳಲ್ಲಿ ಸಂಚರಿಸಿ ಪರಮತ ಖಂಡನಪೂರ್ವಕ ಸ್ವಮತಸಿದ್ಧಾಂತವನ್ನು ಸ್ಥಾಪನಮಾಡಿ ತಮ್ಮ ಶಿಷ್ಯ ಕೋಟಿಯನ್ನುದ್ಧರಿಸೋಣದರಿಂದ, ಈ ಭಗವತ್ಪಾದರಿಗೆ ಇಷ್ಟು ಆಧಿ ಕ್ಯವು ಕೊಡಲ್ಪಟ್ಟಿರುತ್ತದೆ. ಇದೇ ಮೂಲತತ್ವವು. ಇರಲಿ ;

"ಜಗದ್ಗುರು ಪಂಚಾಚಾರ್ಯರು ಆಶ್ರಮಬದ್ಧರು, ವಿರಕ್ತರು ಆಶ್ರಮಾತೀತರು. ವಿರಕ್ತತೆಯು ಪ್ರಾಪ್ತವಾಗುವದಕ್ಕಿಂತ ಮೊದಲು ವಿರಕ್ತ ರಾದರೂ ಜಗದ್ಗುರುಗಳ ಶಿಷ್ಯರೇ ಇರುತ್ತಾರೆ. ಅದು ಪ್ರಾಪ್ತವಾದ ಮೇಲೆ ವಿರಕ್ತರು ಪೂಜ್ಯರು ಪಂಚಾಚಾರ್ಯರು ಪೂಜಕರಾಗುತ್ತಾರೆ. ಲೋಕದಲ್ಲಿ ಮಗನಿಗೆ ತಂದೆಯು ಗುರುವಾಗಿದ್ದರೂ ಮಗನು ಸನ್ಯಾಸವಂ ಸ್ವೀಕರಿಸಿದ ಮೇಲೆ ತಂದೆಗೂ ಗುರುವೇ ಎಂದು ಹೇಳಿಸಿಕೊಳ್ಳುವನಲ್ಲವೇ ? "

ಈ ಪ್ರಕಾರವಾಗಿ ಈ ಶಾಸ್ತ್ರಿಗಳು ಬರೆದಿರುತ್ತಾರೆ. ಒಂದೊಂದನ್ನೇ ವಿಚಾರಿಸೋಣ! ಶಾಸ್ತ್ರಿಗಳೇ, ಜಗದ್ಗುರು ಪಂಚಾಚಾರ್ಯರಲ್ಲಿ ಆಶ್ರಮಗಳನ್ನು ಕಲ್ಪಿಸುವುದು ಪರಶಿವನಲ್ಲಿ ಆಶ್ರಮಗಳನ್ನು ಕಲ್ಪಿಸಿದಂತಾಗುವುದು. ಪರಶಿವನು ಯಾವ ಆಶ್ರಮದವನೆಂದು ನಿಶ್ಚಯ ಮಾಡುತ್ತೀರಿ? ಬ್ರಹ್ಮಚಾರಿಯೋ? ಗೃಹಸ್ಥನೋ? ವಾನಪ್ರಸ್ಥನೋ? ಅಥವಾ ಸನ್ಯಾಸಿಯೋ? ಯಥಾರ್ಥವಾಗಿ ಯಾವುದನ್ನೂ ಹೇಳಲಿಕ್ಕೆ ಬರುವುದಿಲ್ಲ. ಸ್ಥೂಲಬುದ್ಧಿಯುಳ್ಳವರಿಗೆ ಸಾಶ್ರಮಿಯೆಂದು ತೋರಿ ಬಂದರೂ ಕುಂಬಾರಹುಳದಂತೆ ಇರುತ್ತಾನೆ. ಶ್ರೀ ಜಗದ್ಗುರು ಪಂಚಾಚಾರ್ಯರ ಸ್ವರೂಪವಾದರೂ ಪರಶಿವನಂತೆ ಲೀಲಾಮಯವಾದದ್ದಿರುತ್ತದೆ. ಇವರ ವಿಷಯದಲ್ಲಿ ಒಂದೆರಡು ಗ್ರಂಥಗಳಲ್ಲಿ ಆಶ್ರಮಿಗಳೆಂದು ವರ್ಣನವಿದ್ದರೂ ಅವೂ ಕೂಡ ಪರಸ್ಪರವಾಗಿ ಅತ್ಯಂತ ವ್ಯತ್ಯಸ್ತವಾಗಿರುತ್ತವೆ. ಸೂಕ್ಷ್ಮಬುದ್ಧಿಯಿಂದ ವಿಚಾರಿಸಬಹುದು. ಶ್ರೀ ಜಗದ್ಗುರು ರೇಣುಕಾಚಾರ್ಯರು ಗೃಹಸ್ಥಾಶ್ರಮಿಗಳಿದ್ದರೆಂದು ಕೆಲವು ಜನರ ವಾದವುಂಟು. ಇವರಂತೆ ನಮ್ಮ ಶಾಸ್ತ್ರಿಮಹಾಶಯರಾದರೂ ತಿಳಿದುಕೊಂಡಂತೆ ಕಾಣುತ್ತದೆ. ಶ್ರೀ ಜಗದ್ಗುರು ರೇಣುಕಾಚಾರ್ಯರು ವೀರಶೈವ ಮತೋತ್ಪಾದನಕ್ಕೋಸ್ಕರ ನಾಲ್ಕೂ ಯುಗಗಳಲ್ಲಿ ಅವತರಿಸಿದರೆಂದು ಅನೇಕ ಆಗಮಗಳಲ್ಲಿ ಉಲ್ಲೇಖವುಂಟು. ಇವರ ಸರ್ವವರ್ಣನವನ್ನು ಮಾಡಿದಂಥ ಆ ಆಗಮಗಳಲ್ಲಿ ಶ್ರೀ ರೇಣುಕಾಚಾರ್ಯರು ಗೃಹಸ್ಥಾಶ್ರಮಿಗಳಿದ್ದರೆಂದು ಉಲ್ಲೇಖವುಂಟೇನು? ಇದ್ದದ್ದಾದರೆ ಯಾವ ಯಾವ ಆಗಮಗಳ ಎಷ್ಟೆಷ್ಟನೆಯ ಪಟಲಗಳಲ್ಲಿರುತ್ತದೆ? ಕೃತಯುಗದಲ್ಲಿ ಈ ಜಗದ್ಗುರುಗಳು ಯಾವ ಹೆಸರಿನ ಸತಿಯನ್ನು ಲಗ್ನಮಾಡಿಕೊಂಡಿದ್ದರು? ತ್ರೇತಾಯುಗದಲ್ಲಿ ಯಾರನ್ನು ಲಗ್ನವಾಗಿದ್ದರು? ದ್ವಾಪರಯುಗದಲ್ಲಿ ಯಾರನ್ನು ಲಗ್ನವಾಗಿದ್ದರು? ಹಾಗೂ ಕಲಿಯುಗದಲ್ಲಿ ಯಾರನ್ನು ಲಗ್ನವಾಗಿದ್ದರು? ಯಾವ ಯಾವ ಯುಗಗಳಲ್ಲಿ ಇವ

ರಿಗೆ ಎಷ್ಟು ಎಷ್ಟು ಜನ ಮಕ್ಕಳು ಜನಿಸಿದರು? ಆ ಮಕ್ಕಳ ಹೆಸರುಗಳೇನು? ಇವೇ ಮೊದಲಾದ ಪ್ರಶ್ನೆಗಳಿಗೆ ಶಿವಾಗಮಗಳಲ್ಲಿ ಸದುತ್ತರಗಳು ದೊರೆಯುತ್ತವೇನು? ಇಪ್ಪತ್ತೊಂಭತ್ತನೆಯ ಆಗಮದಲ್ಲೇನಾದರೂ ದೊರೆಯಬಹುದು. ಈ ಆಚಾರ್ಯರ ವಿಷಯವಾಗಿ ಆಗಮಗಳಲ್ಲಿ ಲಕ್ಷಾಂತರ ಶ್ಲೋಕಗಳ ವರ್ಣನವಿದ್ದು, ಇವರು ಗೃಹಸ್ಥಾಶ್ರಮಿಗಳೇ ಇದ್ದದ್ದು ನಿಶ್ಚಯವಿದ್ದರೆ ಮೇಲೆ ತೋರಿಸಲ್ಪಟ್ಟ ಪ್ರಶ್ನಗಳ ಸ್ವಲ್ಪಾಭಿಪ್ರಾಯವಾದರೂ ಹೊರಡತಕ್ಕದ್ದು ಯೋಗ್ಯವಿತ್ತಲ್ಲವೇ? ಈ ಎಲ್ಲ ವಿಚಾರಗಳ ಮೇಲಿಂದ ಇವರಲ್ಲಿ ಗೃಹಸ್ಥಾಶ್ರಮವನ್ನು ಕಲ್ಪಿಸುವುದು ಅತ್ಯಂತ ತಪ್ಪಾಗಿರುತ್ತದೆ. ಕಲಿಯುಗದಲ್ಲಿ ಶ್ರೀ ರೇಣುಕಾಚಾರ್ಯರು ಅನೇಕ ರಾಜಪುತ್ರಿಯರನ್ನು ಲಗ್ನವಾಗಿದ್ದರೆಂದೂ, ಅವರಿಗೆ ರುದ್ರಮುನೀಶ್ವರರೆಂಬೋರ್ವ ಪುತ್ರರಿದ್ದರೆಂದೂ, ಈಗ ಸುಮಾರು ೩೦೦ ವರ್ಷಗಳ ಪೂರ್ವದಲ್ಲಿ ಬೊಮ್ಮರಸನೆಂಬ ಕವಿಯಿಂದ ಬರೆಯಲ್ಪಟ್ಟ ಕನ್ನಡ ರೇವಣಸಿದ್ಧೇಶ್ವರ ಪುರಾಣದಲ್ಲಿ ಕಂಡುಬರುತ್ತದೆ. ಆದರೆ ಇದು ನಿಜವಾಗಿರದೆ, ಕೇವಲ ಕಲ್ಪನಾತ್ಮಕವಾಗಿರುತ್ತದೆ. ಈ ವಿವಾಹರೂಪಚರಿತ್ರವು "ರೇಣುಕವಿಜಯ" "ಸಿದ್ಧಾಂತಶಿಖಾಮಣಿ" ಮೊದಲಾದ ಯಾವ ಪ್ರಾಚೀನ ಗ್ರಂಥಗಳಲ್ಲಿಯೂ ಇರುವುದಿಲ್ಲ. ಶ್ರೀ ರುದ್ರಮುನೀಶ್ವರರ ಉತ್ಪತ್ತಿಯು ಕಾಂಚೀ ಏಕಾಮ್ರೇಶ್ವರನ ಮುಂಭಾಗದ ಭೂಮಿಯಿಂದಾಗಿರುತ್ತದೆಂದು ರೇಣುಕವಿಜಯವು ಮುಕ್ತಕಂಠದಿಂದ ಸಾರುತ್ತದೆ. ಶಿವಾಗಮಗಳಿಗೂ ಈ ಆಚಾರ್ಯರ ಚರಿತ್ರಾತ್ಮಕ ಪ್ರಾಚೀನಗ್ರಂಥಗಳಿಗೂ ಬೊಮ್ಮರಸನ ಅಭಿಪ್ರಾಯವು ವಿರುದ್ಧವಾಗಿರುವುದರಿಂದ ಇದನ್ನು ಪಂಡಿತರು ಪ್ರಮಾಣವನ್ನಾಗಿ ಸ್ವೀಕರಿಸಲಿಕ್ಕಾಗುವುದಿಲ್ಲ. ಶ್ರೀ ರೇಣುಕಾಚಾರ್ಯರು ಗೃಹಸ್ಥಾಶ್ರಮಿಗಳಿದ್ದಿಲ್ಲವೆನ್ನುವುದೇ ಶಾಸ್ತ್ರಸಿದ್ಧಾಂತವು.

ಹೀಗಿದ್ದು ಅಲ್ಪಮತಿಗಳು ವಿಪರೀತವಾಗಿ ತಿಳಿದುಕೊಳ್ಳುವುದು ಅವರ ಅಜ್ಞಾನಮೂಲಕವಾಗಿರುತ್ತದೆ. ಒಟ್ಟಿಗೆ ಜಗದ್ಗುರು ಪಂಚಾ

ಚಾರ್ಯರು ಆಶ್ರಮಬದ್ಧರೆಂದು ಹೇಳುವುದು ಶಾಸ್ತ್ರಾನಭಿಜ್ಞರ ಮಾತಾಗಿರುತ್ತದೆ. ಇರಲಿ; ನಮ್ಮಾ ಶಾಸ್ತ್ರಗಳವರ ಅಭಿಪ್ರಾಯದಂತೆ ಜಗದ್ಗುರು ಪಂಚಾಚಾರ್ಯರು ವಿರಕ್ತರಿಗೆ ಪೂರ್ವಾಶ್ರಮದಲ್ಲಿಯೇ ಗುರುಗಳಾಗುತ್ತಾರೆಯೇ ಹೊರತು ಪರಾಶ್ರಮದಲ್ಲಿ ಆಗುವುದಿಲ್ಲವೆಂದು ಹೇಳುವುದು ತಪ್ಪು. ಯಾವ ಆಶ್ರಮದಲ್ಲಿಯಾದರೂ ಇವರು ಗುರುಗಳೇ ಆಗುತ್ತಾರೆ. ವಿರಕ್ತಾಶ್ರಮವನ್ನಾದರೂ ಇವರಿಂದಲೇ ತೆಗೆದುಕೊಳ್ಳತಕ್ಕದ್ದೆಂದು ವೇದಾಭಿಪ್ರಾಯವನ್ನು ಮೊದಲೇ ಪಂಡಿತರು ಎಷ್ಟೋ ಪ್ರಮಾಣಗಳಿಂದ "ಸನ್ಯಾಸಾಶ್ರಮವಿಮರ್ಶ" ಗ್ರಂಥದಲ್ಲಿಯೇ ಸಿದ್ಧಮಾಡಿ ತೋರಿಸಿದ್ದಾರೆ. ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರುಗಳು ಇವರೇ ಆಗಿರುತ್ತಾರಲ್ಲದೆ ಬೇರೆಯವರು ಆಗುವುದಿಲ್ಲವೆಂದು ಸಿದ್ಧಾಂತಶಿಖಾಮಣಿ ವಾತುಲಾಗಮ ಪ್ರಮಾಣಗಳಿಂದ ಸನ್ಯಾಸಾಶ್ರಮವಿಮರ್ಶಗ್ರಂಥದಲ್ಲಿಯೇ ಸ್ಥಿರಗೊಳಿಸಲ್ಪಟ್ಟಿರುತ್ತದೆ.

ವಿರಕ್ತರು ಷಟ್ಸ್ಥಲಸ್ಥಾಪನಾಚಾರ್ಯರಲ್ಲವೆಂದೂ, ಅವುಗಳನ್ನು ಬೋಧಿಸುವ ಕರ್ತೃತ್ವವು ಇವರಲ್ಲಿಲ್ಲವೆಂದೂ ಈ ಮೊದಲೇ ಖಂಡಿಸಲ್ಪಟ್ಟಿರುತ್ತದೆ. ಈ ಸರ್ವಯಥಾರ್ಥವಿಚಾರಗಳಿಂದ ಯಾವಾಗ್ಯಾದರೂ ವಿರಕ್ತರು ಶಿಷ್ಯರಾಗಿ ನಡೆದು ಇವರ (ಆಚಾರ್ಯರ) ಕಡೆಯಿಂದಲೇ ವೇದಾಗಮಾಭಿಪ್ರಾಯಗಳಂತೆ ಉಪದೇಶವನ್ನು ಪಡೆದು ಮುಕ್ತರಾಗತಕ್ಕದ್ದೆಂದು ಶಾಸ್ತ್ರಸಿದ್ಧಾಂತವು. ಹೀಗಿದ್ದು ಪಂಚಾಚಾರ್ಯರು ಪೂಜಕರೆಂದು ವಿವೇಕಶೂನ್ಯತೆಯಿಂದ ತಿಳಿದುಕೊಂಡ ಮನಸ್ಸಿಗೂ, ನುಡಿದ ನಾಲಗೆಗೂ, ಬರೆದ ಕೈಗೂ ಅನುಪಮಪ್ರಾಯಶ್ಚಿತ್ತವನ್ನು ಮಾಡಿಕೊಂಡದ್ದಾದರೆ ಈ ಮಹಾದೋಷವು ಬಿಟ್ಟೀತೇ ಹೊರತು, ಇಲ್ಲದಿದ್ದರೆ ದೋಷಪುಂಜದಿಂದ ಕೂಡಿಕೊಂಡು, ಮರಣಾಂತದಲ್ಲಿ ಯಾವುದನ್ನು ಭೋಗಿಸಬೇಕೋ ಅದನ್ನೇ ಭೋಗಿಸಿ, ಯಾವ ಸ್ಥಾನದಲ್ಲಿ ಬೀಳಬೇಕೋ ಅದೇ ಸ್ಥಾನದಲ್ಲಿ ಬೀಳಬೇಕಾಗುವುದೆಂದು ಸರಲಕಂಠ

ದಿಂದ ಹೇಳಬೇಕಾಗುತ್ತದೆ. ಇರಲಿ; ಮಗನು ಸನ್ಯಾಸವಂ ಸ್ವೀಕರಿಸಿದ ಮೇಲೆ ತಂದೆಗೆ ಗುರುವಾಗುತ್ತಾನೆಂದು ದೃಷ್ಟಾಂತವನ್ನು ಕೊಟ್ಟಿರುವುದು ಅತ್ಯಂತ ತಿಳಿವಳಿಕೆಯಿಲ್ಲದ ಮಾತಾಗಿರುತ್ತದೆ. ಯಾಕಂದರೆ— ಅನ್ಯಮತಗಳಲ್ಲಿ ಮಗನು ಸನ್ಯಾಸವನ್ನು ಸ್ವೀಕರಿಸಿದಮೇಲೆ ತಂದೆಯು ಯಾವ ಚಿಹ್ನವನ್ನೂ ತನ್ನಲ್ಲಿ ಸಂಬಂಧಮಾಡಿಕೊಳ್ಳದೆ ಕೇವಲ ಪರಬ್ರಹ್ಮನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ, ಸೋಹಂಭಾವನೆಯುಳ್ಳವನಾಗುತ್ತಾನೆ. ಅವನು ಪೂರ್ವದ ಉಪನಯನ ಕಾಲದಲ್ಲಿ ಸಂಬಂಧಿಸಿದ ಯಜ್ಞೋಪವೀತವನ್ನು ಕಿತ್ತುಹಾಕುತ್ತಾನೆ. ಚಂದನ, ಗಾಯತ್ರೀ ಮಂತ್ರ ಮೊದಲಾದ ಯಾವತ್ತು ಚಿನ್ನಗಳನ್ನೂ ಬಿಡುತ್ತಾನೆ. ನಮ್ಮ ಸನ್ಯಾಸಿಗಳಿಗೆ ಹಾಗೆ ಮಾಡಲಿಕ್ಕೆ ಬರುತ್ತದೇನು? ಇವರು ದೀಕ್ಷಾ ಕಾಲದಲ್ಲಿ ಗುರುವಿನಿಂದ ಕೊಡಲ್ಪಟ್ಟ ಲಿಂಗವನ್ನು ಯಜ್ಞೋಪವೀತದಂತೆ ಕಿತ್ತುಹಾಕುವರೋ? ಚಂದನಾದಿಗಳಂತೆ ಭಸ್ಮವನ್ನು ದೂರೀಕರಿಸುವರೋ? ಗಾಯತ್ರೀಮಂತ್ರದಂತೆ ಪಂಚಾಕ್ಷರೀಮಂತ್ರರತ್ನವನ್ನು ಪಲಾಯನ ಮಾಡಿಸುವರೋ? ಒಂದೂ ಇಲ್ಲ, ಪೂರ್ವದ ಗುರುಸಂಬಂಧವು ಸರ್ವರೀತಿಯಿಂದಲೂ ಇರುತ್ತದೆ. ಹೀಗಿದ್ದು ಈ ದೃಷ್ಟಾಂತವನ್ನು ಕೊಟ್ಟದ್ದು ಕೇವಲ ಅಸಮಂಜಸವಾಗಿದೆ. ಅವರಂತೆ ನಮ್ಮ ವಿರಕ್ತ ಮಹಾಶಯರಾದರೂ ಪೂರ್ವದ ಲಿಂಗ, ಭಸ್ಮ, ಮಂತ್ರ ಮೊದಲಾದವುಗಳನ್ನು ಬಿಟ್ಟಲ್ಲಿ ಈ ಶಾಸ್ತ್ರಗಳ ಅಭಿಪ್ರಾಯದಂತೆ ಆಚರಿಸಬಹುದು. ವೀರಶೈವಶಾಸ್ತ್ರದ ಮರ್ಮವನ್ನೂ ಮತಾಂತರಶಾಸ್ತ್ರದ ಮರ್ಮವನ್ನೂ ತಿಳಿಯದೆ ಹೀಗೆ ಬರೆಯುವದು ತಿಳಿವಳಿಕೆಯಿಲ್ಲದವರ ಬರವಣಿಗೆಯಾಗುತ್ತದೆ.

ಕ್ರಿಯಾದೀಕ್ಷಾದಿನಾಪೂರ್ವೈರಾಚಾರ್ಯೈರ್ದತ್ತಮಂಜಸಾ ।
ಸತ್ಕ್ರಿಯಾಸಂಯುತಂ ಚೇಷ್ಟಲಿಂಗಂ ಬ್ರಹ್ಮಮಯಂತಥಾ ॥

ಗುರುವಕ್ತ್ರೇಣ ಸೂಕ್ಷ್ಮೇತು ಶರೀರೇ ಚ ದ್ವಿತೀಯಕೇ ।
ಇದಂ ಪ್ರಾಣಮಯಂ ಲಿಂಗಮಿತಿ ಸಂಭಾವಯೇತ್ತಥಾ ॥
ತಥೈವ ಪ್ರಾಣಲಿಂಗಂ ತು ಶರೀರೇ ಕಾರಣಾಹ್ವಯೇ ।
ಭಾವಲಿಂಗಮಿತಿ ಜ್ಞಾತ್ವಾ ಚೇಷ್ಟಲಿಂಗಂ ತ್ರಿಧಾಕೃತಂ ॥
ಮಹಾಲಿಂಗಮಿತಿ ಜ್ಞಾತ್ವಾ ತೇಷು ಭೇದಂ ನಭಾವಯೇತ್ ।
ಇಷ್ಟಲಿಂಗಂ ತತೋ ಧೃತ್ವಾ ಪಂಚಾಚಾರ್ಯೈಸ್ತತಃಪರಂ ॥
ಅಂತರಂಗೇ ಪಿತುರ್ಭಾವಂ ಭಾವಯಿತ್ವಾತು ತೋಷಯೇತ್ ॥

ಇತಿ ಪಾಶುಪತತಂತ್ರೇ—

ಈ ಪ್ರಕಾರವಾಗಿ ಪಾಶುಪತತಂತ್ರದಲ್ಲಿ ಪಾರ್ವತಿಯ ಮುಂದೆ ಪರಮೇಶ್ವರನು ವಿರಕ್ತ ಲಕ್ಷಣಗಳನ್ನು ಹೇಳುವಕಾಲಕ್ಕೆ, ಶ್ರೀಮತ್ಪಂಚಾಚಾರ್ಯರಿಂದ ಬ್ರಹ್ಮಮಯವಾದ ಇಷ್ಟಲಿಂಗವನ್ನು ಪಡೆದುಕೊಂಡು ಗುರುಗಳಾದ ಅವರ ಮುಖದಿಂದಲೇ ಸ್ಥೂಲಸೂಕ್ಷ್ಮಕಾರಣ ಶರೀರಗಳಲ್ಲಿ ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗಗಳ ಸಂಬಂಧವನ್ನು ಮಾಡುವುದನ್ನು ತಿಳಿದುಕೊಂಡು ಆ ಆಚಾರ್ಯರಲ್ಲಿ ತಂದೆಯ ಭಾವವನ್ನು ಇಟ್ಟು ಅವರನ್ನು ಸಂತೋಷಗೊಳಿಸಬೇಕೆಂದು ನಿರೂಪಿಸಿದ್ದಾನೆ. ಹೀಗಿದ್ದು ನಮ್ಮ ಶಾಸ್ತ್ರಿಮಹಾಶಯರು ತಂದೆಗೆ ಮಗನೆಂದೂ ಮಗನಿಗೆ ತಂದೆಯೆಂದೂ ಕಲ್ಪಿಸಿ ವ್ಯತ್ಯಸ್ತಮಾಡಿರುವುದು ಅವರ ಭ್ರಮಮೂಲಕವೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

ವಿರಾಟ್ಸ್ವರೂಪ ಭಗವದ್ಬ್ರಹ್ಮಣೋ ಮುಖಪಂಚಕಾತ್ ।
ಸಮೂದ್ಭೂತೈರ್ದೀಕ್ಷಿತೋ ಯೋ ದೂರೀಕೃತಮಲತ್ರಯಃ ॥
ಷಟ್ಸ್ಥಲಾಂತೇ ಪರಬ್ರಹ್ಮ ಸೋಽಹಮೇವೇತಿ ನಿಶ್ಚಿತಃ ।
ಮುಕ್ತಿಮಾರ್ಗಂ ಸಮಾಶ್ರಿತ್ಯ ಲೌಕಿಕಾಚಾರವರ್ಜಿತಃ ॥
ಸಏವ ಹಿ ನಿರಾಭಾರಿವೀರಶೈವ ಇತೀರಿತಃ ॥

ಇತಿ ವೀರಶೈವಸದಾಚಾರಸಂಗ್ರಹೇ.

ಪಂಚಾಚಾರ್ಯಪದಾಂಬುಜಾನಿ ಸತತಂ ಸಂಸೇವ್ಯ ಶೈವೀಂ ಶುಭಾಂ
ದೀಕ್ಷಾಂ ತೈರ್ಗುರುಭಿರ್ಗುರೂತ್ತಮವರೈಃ ಸಂಪಾದ್ಯ ಮುಕ್ತಿ
ಪ್ರದಾಂ ॥
ತದ್ಧ್ಯಾನಂ ಸರಲೇನ ಶುದ್ಧಮನಸಾ ಕುರ್ವಂಶ್ಚ ಪೂಜಾಪರೋ।
ಗ್ರಾಮಂಲೋಕಯುತಂ ವಿಸೃಜ್ಯವಿಪಿನೇ ಘೋರೇವಸನ್ನಿತ್ಯಶಃ॥
ದೂರೀಕೃತ್ಯ ಮಲತ್ರಯಂ ಪರಶಿವೇ ಚಿತ್ತಂ ಸದಾ ಸಂದಧನ್ ।
ಜಾನನ್ ಷಟ್ಸ್ಥಲದರ್ಶನಂ ವರಪರಬ್ರಹ್ಮೇತಿ ಸೋಽಹಂವದನ್॥
ದೀಕ್ಷಾದಂಡನಖಂಡನಾದಿವಿಷಯಾನುತ್ಸೃಜ್ಯ ಭಿಕ್ಷಾಪರೋ ।
ಯಃ ಸ್ಯಾತ್ತಂ ಖಲು ವೀರಶೈವಮಿತಿಮನ್ಯಂತೇ ನಿರಾಭಾರಿಣಂ॥
ಇತಿ ವೀರಶೈವಾದರ್ಶೇ.

ಇತ್ಯಾದಿಪರಮಪ್ರಮಾಣೀಭೂತಗ್ರಂಥಗಳ ಆಧಾರಗಳಿಂದ ಸಿದ್ಧ ವಾಗುವುದೇನಂದರೆ—ಯಾವನು ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಸೇವಾತತ್ಪರನಾಗಿ ಅವರ ಕಡೆಯಿಂದ ಮುಕ್ತಿದಾಯಕವಾದ ದೀಕ್ಷೆಯಂ ಪಡೆದುಕೊಂಡು, ಅವರ ಕಡೆಯಿಂದಲೇ ಷಟ್ಸ್ಥಲಕ್ರಮವಂ ತಿಳಿದು, ಮಲತ್ರಯವನ್ನು ದೂರಮಾಡಿ, ದೀಕ್ಷಾ ದಂಡನ ಖಂಡನಾದಿಗಳನ್ನು ಮಾಡದೆ, ಕೇವಲ ಭಿಕ್ಷೋಪಜೀವಿಯಾಗಿ ಗ್ರಾಮವನ್ನು ಬಿಟ್ಟು ಅರಣ್ಯ ವನ್ನು ಸೇರಿ, ಆ ಗುರುಗಳನ್ನು ಮನಸ್ಸಿನಿಂದ ಧ್ಯಾನಿಸುತ್ತಲೂ ಪೂಜಿಸುತ್ತಲೂ ಇರುತ್ತಾನೆಯೋ ಅವನೇ ನಿರಾಭಾರಿ ವೀರಶೈವ ನೆಂದು ಈ ಶ್ಲೋಕಗಳ ಅಭಿಪ್ರಾಯವಿರುತ್ತದೆ. ಹೀಗಿದ್ದು ಶಿಷ್ಯೋತ್ತಮ ರೆನಿಸಿಕೊಂಡ ವಿರಕ್ತರಲ್ಲಿ ದುರಭಿಮಾನದಿಂದ ಗುರುತ್ವವನ್ನು ಶಾಸ್ತ್ರ ವಿರುದ್ಧವಾಗಿ ಕಲ್ಪಿಸಿ ಪ್ರಸಿದ್ಧಪಡಿಸಿರುವುದು ನಮ್ಮ ಶಾಸ್ತ್ರಗಳವರಿಗೆ ಒಂದು ತರಹದ ಕಲಂಕವೇ ಸರಿ! ಇರಲಿ; ಅದ್ಯಾಪಿ ಗುರುಗಳು ಜಂಗಮರಲ್ಲಿಯೇ (ಅಂದರೆ ಇವರ ಅಭಿಪ್ರಾಯದಂತೆ ವಿರಕ್ತರಲ್ಲಿಯೇ) ತೀರ್ಥಪ್ರಸಾದಗಳನ್ನು ಸ್ವೀಕರಿಸುವುದು ಲೋಕದಲ್ಲಿ ರೂಢವಾಗಿದೆ

ಯೆಂದು ಶಾಸ್ತ್ರಿಗಳವರು ಅಭಿಪ್ರಾಯಪಡುತ್ತಾರೆ. ಶಾಸ್ತ್ರಿಗಳವರೇ! ನಮ್ಮ ಮತದಲ್ಲಿ ಅಶಾಸ್ತ್ರೀಯ ಪದ್ಧತಿಗಳು ಎಷ್ಟು ಬಿದ್ದಿಲ್ಲ? ಹಾಗೂ ಬೀಳಹತ್ತಿರುವುದಿಲ್ಲ? ಶಾಸ್ತ್ರವಿರುದ್ಧವಾಗಿ ಅಜ್ಞಾನಿಗಳು ಆಚರಿಸುವವು ಗಳೆಲ್ಲವೂ ಪ್ರಮಾಣಗಳೇನು? ಹಾಗಾದರೆ ವೀರಶೈವರಲ್ಲಿ ಎಷ್ಟೋ ಅಜ್ಞಾನಿಜನರು ಭವಿಸಂಗವನ್ನು ಮಾಡುತ್ತಾರೆ; ದೀಕ್ಷೆಯನ್ನಂತೂ ಮಾಡಿಸಿಕೊಳ್ಳುವುದೇ ಇಲ್ಲ; ಈಗ ನವೀನಕಾಲಕ್ಕನುಸಾರವಾಗಿ ಎಷ್ಟೋ ಜನರು ಶೂದ್ರರ ಕೈಗಳಿಂದ ತಯಾರಾದ ಸೋಡಾ ವಾಟರ್, ಲಿಮ್ಲೇಟ್-ಬಿಸ್ಕೇಟ್-ಸಿಗರೇಟ್-ಚಹಾ-ಲಾಡೂ-ಚಿರೋಟಿ ಮೊದಲಾದವುಗಳನ್ನು ನಿರ್ಭೀತಿಯಿಂದುಪಯೋಗಿಸುತ್ತಾರೆ; ಚರ್ಮ ಮಯವಾದ ಹ್ಯಾಂಡ್ ವಾಚುಗಳನ್ನು ಕೈಗೆ ಕಟ್ಟಿಕೊಳ್ಳುತ್ತಾರೆ; ತೊಗಲಿನ ಬೊಕ್ಸಗಳನ್ನು ಕೈಗಳಲ್ಲಿ ಹಿಡಿದುಕೊಂಡು ತಿರುಗುತ್ತಾರೆ; ಬೂಟುಗಳನ್ನು ಮನೆಯೊಳಗೆ ಎಲ್ಲಿಬೇಕು ಅಲ್ಲಿ ಒಯ್ಯುತ್ತಾರೆ. ಇವೆಲ್ಲ ಈಗ ಲೋಕರೂಢವಾಗಹತ್ತಿರುತ್ತವೆ. ಇವುಗಳನ್ನು ಆಚರಿಸುವುದು ವಿಹಿತವೋ? ಇಂಥ ಅನಾಚಾರಗಳನ್ನು ದೃಷ್ಟಾಂತಗಳನ್ನಾಗಿ ಉದಾ ಹರಿಸುವುದು ನಿಮಗೆ ಭೂಷಣವೊ? ಮಹಾಶಯರೇ! ಇದರಂತೆ ವಿರಕ್ತರಲ್ಲಿ ಧರ್ಮಶಾಸ್ತ್ರಜ್ಞಾನವಿಲ್ಲದವರು ಆಚರಿಸುತ್ತಿರಬಹುದು; ಇಷ್ಟಕ್ಕೆ ಇದೊಳ್ಳೇ ಪ್ರಮಾಣವಾಯಿತೇನು? ಧರ್ಮಶಾಸ್ತ್ರಜ್ಞಾನಿ ಗಳಾರೂ ವಿರಕ್ತರಲ್ಲಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುವುದಿಲ್ಲ, ಜ್ಞಾನಿಗಳಾದ ವಿರಕ್ತರು ಪಾದೋದಕ ಪ್ರಸಾದಗಳನ್ನು ಕೊಡುವುದಿಲ್ಲ. ವಿರಕ್ತರಲ್ಲಿ ತೀರ್ಥಪ್ರಸಾದಗಳನ್ನು ಸ್ವೀಕರಿಸಬಾರದೆನ್ನುವುದೇ ವೀರ ಶೈವ ಧರ್ಮಶಾಸ್ತ್ರದ ಶಾಸನವು.

"ಆಚಾರ್ಯ ಸಾಂಪ್ರದಾಯಕರು (ಸಂಸ್ಕಾರಕೃದ್ಗುರುಃ) ಎಂಬ ಕೋಶೋಕ್ತಿಯಂತೆ ದೀಕ್ಷೋಪದೇಶಪೂರ್ವಕ ಅಧ್ಯಯನಾದಿಗಳಲ್ಲಿ ಶಿಷ್ಯಂಗೆ ಪ್ರವೃತ್ತಿಯನ್ನುಂಟುಮಾಡುವದರಿಂದ ಸಾಧಾರಣಗುರುಗಳೆಂದು ಹೇಳಿಸಿ

ಕೊಳ್ಳುವರು; ಜಂಗಮರೆಂಬ ವಿರಕ್ತರು ಸಂಸಾರನಿವೃತ್ತಿಗೆ ಹೇತುಭೂತ ವಾದ ಷಟ್ಸ್ಥಲಮಾರ್ಗವನ್ನುಪದೇಶಿಸಿ ಭಕ್ತರನ್ನುದ್ಧರಿಸುವದರಿಂದ ಅಸಾಧಾರಣ ಗುರುಗಳೆಂದು ಹೇಳಿಸಿಕೊಳ್ಳುವರು.''

ಎಂದು ಬರೆದಿದ್ದಾರೆ. ಶಾಸ್ತ್ರಿಗಳವರೇ! ಷಟ್ಸ್ಥಲೋಪದೇಶಕ್ಕೂ ಸಂಸಾರ ನಿವೃತ್ತಿಗೂ ಮತಸ್ಥಾಪನಾಚಾರ್ಯರು ಕಾರಣರಲ್ಲವೇನು? ಇವರು ಸಾಧಾರಣಗುರುಗಳೇನು? ಶಹಬಾಸ! ಶಾಸ್ತ್ರಿಗಳೇ! ನಿಮ್ಮ ಬುದ್ಧಿಯನ್ನು ಬ್ರಹ್ಮನು ಎಷ್ಟು ಗಡುತರವನ್ನಾಗಿ ಮಾಡಿರಬಹುದು? ಷಟ್ಸ್ಥಲಸ್ಥಾಪನಾಚಾರ್ಯರೂ ತನ್ಮೂಲಕ ಇವುಗಳನ್ನು (ಷಟ್ಸ್ಥಲಗಳನ್ನು) ಉಪದೇಶಿಸಲಿಕ್ಕೆ ಅರ್ಹರೂ ಜಗದ್ಗುರು ಪಂಚಾಚಾರ್ಯರೇ ಎಂದು ಮೊದಲೇ ಸಾಧಕ ಬಾಧಕ ಪ್ರಮಾಣಗಳಿಂದ ಸ್ಥಿರಮಾಡಲ್ಪಟ್ಟಿರುತ್ತದೆ. ಇಲ್ಲಿ ಈ ವಿಷಯವನ್ನು ಪುನಃ ಪ್ರಸ್ತಾಪಿಸುವ ಕಾರಣವಿಲ್ಲ. ಶಿಕ್ಷಾಗುರು ಮೋಕ್ಷಗುರುಗಳೆಂದು ಪ್ರಸಿದ್ಧರಾದ ದೀಕ್ಷಾಗುರುಗಳೇ ಸಂಸಾರನಿವೃತ್ತಿಗೆ ಮೂಲಕಾರಣೀಭೂತರಾಗುತ್ತಾರಲ್ಲದೆ ವಿರಕ್ತರು ಎಂದೂ ಆಗುವುದಿಲ್ಲ. ಸಿದ್ಧಾಂತಶಿಖಾಮಣಿಯ ೧೫ನೆಯ ಪರಿಚ್ಛೇದದಲ್ಲಿ—

## ದೀಕ್ಷಾಗುರುಸ್ಥಲಂ.

ದೀಯತೇ ಪರಮಂ ಜ್ಞಾನಂ ಕ್ಷೀಯತೇ ಪಾಶಬಂಧನಂ।
ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾಗುರುಃ ಸ್ಮೃತಃ॥
ಗುಣಾತೀತಂ ಗುಕಾರಂಚ ರೂಪಾತೀತಂ ರುಕಾರಕಂ।
ಗುಣಾತೀತಮರೂಪಂ ಚ ಯೋ ದದ್ಯಾತ್ಸ ಗುರುಃ ಸ್ಮೃತಃ॥೨॥
ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಲಂ।
ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಚೋಚ್ಯತೇ॥೩॥
ಷಡಧ್ವಾತೀತಯೋಗೇನ ಯತತೇ ಯಸ್ತು ದೇಶಿಕಃ।
ಮಾಯಾಬ್ಧಿತಾರಣೋಪಾಯಹೇತುರ್ವಿಶ್ವಗುರುಃ ಶಿವಃ ॥೪॥

ಅಖಂಡಂ ಯೇನ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು ।
ಆತ್ಮಯೋಗಪ್ರಭಾವೇನ ಸಗುರುರ್ವಿಶ್ವಭಾಸಕಃ ॥೫॥

## ಶಿಕ್ಷಾಗುರುಸ್ಥಲಂ.

ದೀಕ್ಷಾಗುರುರಸೌ ಶಿಕ್ಷಾಹೇತುಃ ಶಿಷ್ಯಸ್ಯ ಬೋಧಕಃ ।
ಪ್ರಶ್ನೋತ್ತರಪ್ರವಕ್ತಾಚ ಶಿಕ್ಷಾಗುರುರಿತೀರ್ಯತೇ ॥೬॥

ಬೋಧಕೋಽಯಂ ಸಮಾಖ್ಯಾತೋ ಬೋಧ್ಯಮೇತದಿತಿಸ್ಫುಟಂ ।
ಶಿಷ್ಯೇ ನಿಯುಜ್ಯತೇ ಯೇನ ಸ ಶಿಕ್ಷಾಗುರುರುಚ್ಯತೇ ॥೭॥

ಸಂಸಾರತಿಮಿರೋನ್ಮಾಥಿಶರಚ್ಚಂದ್ರಮರೀಚಯಃ ।
ವಾಚೋ ಯಸ್ಯ ಪ್ರವರ್ತಂತೇ ತಮಾಚಾರ್ಯಂ ಪ್ರಚಕ್ಷತೇ॥೮॥

ದದಾತಿ ಯಃ ಪತಿಜ್ಞಾನಂ ಜಗನ್ಮಾಯಾನಿವರ್ತಕಂ ।
ಅದ್ವೈತವಾಸನೋಪಾಯಂ ತಮಾಚಾರ್ಯವರಂ ವಿದುಃ ॥೯॥

ಪೂರ್ವಪಕ್ಷಂ ಸಮಾದಾಯ ಜಗದ್ಭೇದವಿಕಲ್ಪನಂ ।
ಅದ್ವೈತಕೃತಸಿದ್ಧಾಂತೋ ಗುರುರೇಷ ಗುಣಾಧಿಕಃ ॥೧೦॥

ಸಂದೇಹವನಸಂದೋಹಸಮುಚ್ಛೇದಕುಠಾರಿಕಾ ।
ಯತ್ಸೂಕ್ತಿವಿಮಲಾಧಾರಾ ಸ ಗುರೂಣಾಂ ಶಿಖಾಮಣಿಃ ॥೧೧॥

ಯತ್ಸೂಕ್ತಿದರ್ಪಣಾಭೋಗೇ ನಿರ್ಮಲೇ ದೃಶ್ಯತೇ ಸದಾ ।
ಮೋಕ್ಷಶ್ರೀರ್ಬಿಂಬರೂಪೇಣ ಸ ಗುರುರ್ಭವತಾರಕಃ ॥೧೨॥

ಶಿಷ್ಯಾಣಾಂ ಹೃದಯಾಲೇಖ್ಯಂ ಪ್ರದ್ಯೋತಯತಿ ಯಃ ಸ್ವಯಂ ।
ಜ್ಞಾನದೀಪಿಕಯಾಽನೇನ ಗುರುಣಾ ಕಃ ಸಮೋ ಭವೇತ್॥೧೩॥

ಪರಮಾದ್ವೈತವಿಜ್ಞಾನಪರಮೌಷಧಿದಾನತಃ ।
ಸಂಸಾರರೋಗನಿರ್ಮಾಥೀ ದೇಶಿಕಃ ಕೇನ ಲಭ್ಯತೇ ॥೧೪॥

# ಜ್ಞಾನ ಗುರುಸ್ಥಲಂ.

ಉಪದೇಷ್ಟೋಪದೇಶಾನಾಂ ಸಂಶಯಚ್ಛೇದಕಾರಕಃ ।
ಸಮ್ಯಗ್ಜ್ಞಾನಪ್ರದಃ ಸಾಕ್ಷಾದೇಷ ಜ್ಞಾನಗುರುಃ ಸ್ಮೃತಃ ॥೧೫॥
ನಿರಸ್ತ ವಿಶ್ವಸಂಭೇದಂ ನಿರ್ವಿಕಾರಂ ಚಿದಂಬರಂ ।
ಸಾಕ್ಷಾತ್ಕರೋತಿ ಯೋ ಯುಕ್ತ್ಯಾ ಸ ಜ್ಞಾನಗುರುರುಚ್ಯತೇ ॥೧೬॥
ಕಲಂಕವಾನಸೌ ಚಂದ್ರಃ ಕ್ಷಯವೃದ್ಧಿಪರಿಪ್ಲುತಃ ।
ನಿಷ್ಕಲಂಕಸ್ಥಿತೋ ಜ್ಞಾನಚಂದ್ರಮಾ ನಿರ್ವಿಕಾರವಾನ್ ॥೧೭॥
ಪಾರ್ಶ್ವಸ್ಥತಿಮಿರಂ ಹಂತಿ ಪ್ರದೀಪೋ ಮಣಿನಿರ್ಮಿತಃ ।
ಸರ್ವಗಾಮಿತಮೋ ಹಂತಿ ಬೋಧದೀಪೋ ನಿರಂಕುಶಃ ॥೧೮॥
ಸರ್ವಾರ್ಥಸಾಧಕಜ್ಞಾನವಿಶೇಷಾದೇಶತತ್ಪರಃ ।
ಜ್ಞಾನಾಚಾರ್ಯಃ ಸಮಸ್ತಾನಾಮನುಗ್ರಹಕರಃ ಶಿವಃ ॥೧೯॥
ಕಟಾಕ್ಷಚಂದ್ರಮಾ ಯಸ್ಯ ಜ್ಞಾನಸಾಗರವರ್ಧನಃ ।
ಸಂಸಾರತಿಮಿರಚ್ಛೇದೀ ಸ ಗುರುರ್ಜ್ಞಾನಪಾರಗಃ ॥೨೦॥
ಬಹಿಸ್ತಿಮಿರವಿಚ್ಛೇತ್ತಾ ಭಾನುರೇಷ ಪ್ರಕೀರ್ತಿತಃ ।
ಬಹಿರಂತಸ್ತಮಶ್ಛೇದೀ ವಿಭುರ್ದೇಶಿಕಭಾಸ್ಕರಃ ॥೨೧॥
ಕಟಾಕ್ಷಲೇಶಮಾತ್ರೇಣ ವಿನಾ ಧ್ಯಾನಾದಿಕಲ್ಪನಂ ।
ಶಿವತ್ವಂ ಭಾವಯೇದ್ಯತ್ರ ಸ ವೇದಃ ಶಾಂಭವೋಮತಃ ॥೨೨॥
ಶಿವವೇದಕರೇ ಜ್ಞಾನೇ ದತ್ತೇ ಯೇನ ಸುನಿರ್ಮಿತೇ ।
ಜೀವನ್ಮುಕ್ತೋ ಭವೇಚ್ಛಿಷ್ಯಃ ಸ ಗುರುರ್ಜ್ಞಾನಸಾಗರಃ ॥೨೩॥

ಈ ಪ್ರಕಾರವಾಗಿ ಷಟ್ಸ್ಥಲ ಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಾಚಾರ್ಯರೇ ತ್ರಿಭುವನ ಪ್ರಸಿದ್ಧನಾದ ಹಾಗೂ ಮಹಾ ವಿರಕ್ತನಾದ ಅಗಸ್ತ್ಯಮಹರ್ಷಿಗೆ ಷಟ್ಸ್ಥಲೋಪದೇಶವನ್ನು ಮಾಡುವ ಕಾಲಕ್ಕೆ ದೀಕ್ಷಾಗುರುಗಳೇ ತಾರತಮ್ಯದಿಂದ ಸಂಸಾರ

ನಿವೃತ್ತಿಗೆ ಮೂಲಭೂತರೆಂದೂ, ಇವರೇ ಮುಖ್ಯಗುರುಗಳೆಂದೂ ಅಪ್ಪಣೆಯನ್ನು ಕೊಡಿಸಿದ್ದಾರೆ. ಈಯಥಾರ್ಥತತ್ತ್ವವನ್ನು ನಮ್ಮ ಈ ಶಾಸ್ತ್ರಿಗಳು ತಿಳಿದು ಅದರಂತೆ ಏಕೆ ಆಚರಿಸಬಾರದು? ಶಾಸ್ತ್ರಿಮಹಾಶಯರೇ! ವಿರಕ್ತರು ನಿಮ್ಮ ಹೇಳಿಕೆಯಂತೆ ಅಸಾಧಾರಣಗುರುಗಳೂ ಅಲ್ಲ: ಸಾಧಾರಣಗುರುಗಳೂ ಅಲ್ಲ; ಒಟ್ಟಗೆ ಇವರಲ್ಲಿ ಗುರುತ್ವವೇ ಇಲ್ಲವೆಂದು ಶಾಸ್ತ್ರಸಿದ್ಧಾಂತವು. ಹೀಗಿದ್ದು ವಿರಕ್ತರೇ ಮುಖ್ಯಗುರುಗಳೆಂದೂ, "ಪರೀಕ್ಷ್ಯಲೋಕಾನ್ ಕರ್ಮಚಿತೋ ಬ್ರಾಹ್ಮಣೋ ನಿರ್ವೇದಮಾಯಾತ್" ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಪ್ರತಿಪಾದ್ಯಗುರುಪದವಾಚ್ಯರು ಇವರೇ ಆಗುತ್ತಾರೆಂದೂ ಬರೆಯುವುದನ್ನು ನೋಡಿದರೆ ಅತ್ಯಂತ ಆಶ್ಚರ್ಯವೆನಿಸುತ್ತದೆ. ಮಹಾಶಯರೇ! ಪಂಡಿತರು ಉದಾಹರಿಸಿರುವ ಸರ್ವಶ್ರುತಿವಾಕ್ಯಗಳ ಅಭಿಪ್ರಾಯವು ಸಿದ್ಧಾಂತಶಿಖಾಮಣಿಯ ಗುರುಕಾರುಣ್ಯಸ್ಥಲದಲ್ಲಿ ಅಡಕವಾಗಿ ಎರಡೂ ಒಂದೇ ಅಭಿಪ್ರಾಯವನ್ನು ಕೊಡುತ್ತಿರಲು, ಈ ವಿಷಯವನ್ನು ಪೂರ್ಣವಾಗಿ ತಿಳಿದುಕೊಳ್ಳದೆ, ವಿರಕ್ತರಲ್ಲಿ ಎಳ್ಳುಕಾಳಷ್ಟು ಗುರುತ್ವವು ಇಲ್ಲದಿದ್ದಾಗ್ಯೂ ಅವುಗಳೆಲ್ಲ ಅಸಾಧಾರಣಗುರುಗಳಾದ ವಿರಕ್ತರಲ್ಲಿಯೇ ಸಂಬಂಧಿಸುತ್ತವೆಂದು ಗುಡ್ಡದಂಥ ವಾಕ್ಯವನ್ನು ಬರೆದು ಕುಳಿತುಕೊಂಡಿರುವಿರಲ್ಲ! ಧನ್ಯ! ಧನ್ಯ!! ಗುರುಕಾರುಣ್ಯಸ್ಥಲವು ವಿರಕ್ತರ ಪರವಾಗಿರುತ್ತದೆಂದು ನಿಮ್ಮ ಕಾಲದಲ್ಲಿ ಸಿದ್ಧವಾಗಲಿ; ಅಂದರೆ ಶೋಭೆಯು! ಶಾಸ್ತ್ರಿಗಳೇ! ಶಾಸ್ತ್ರಿಯೆಂದು ಹೆಸರನ್ನಿಟ್ಟುಕೊಂಡಿರುವ ನಿಮಗೆ ಹೀಗೆ ಅಡ್ಡಹಾದಿಯನ್ನು ಹಿಡಿದು ನಡೆಯುವುದು ಭೂಷಣವಲ್ಲ; ಆ ಹೆಸರಿಗೆ ಯೋಗ್ಯ ಮರ್ಯಾದೆಯನ್ನು ತಂದುಕೊಳ್ಳಿರಿ. ಇಷ್ಟೇ ನನ್ನ ಸೂಚನೆಯು! ಮಹಾಶಯರೇ! ಮಠಸ್ಥಾಪನಾಚಾರ್ಯರು ಮುಖ್ಯಗುರುಗಳಾಗುತ್ತಾರೆಯೋ ಅಥವಾ ಅವರು ಸ್ಥಾಪನಮಾಡಿದ ಮಠದಲ್ಲಿ ಜನಿಸಿ ಅವರಿಂದ ಅನುಗೃಹೀತರಾದ ಶಿಷ್ಯರು ಗುರುಗಳಾಗುತ್ತಾರೆಯೋ

ಎನ್ನುವದನ್ನು ಪೂರ್ಣವಾಗಿ ವಿಚಾರಿಸಿರಿ. ಸರ್ವಮತಗಳಲ್ಲಿ ನಿಮ್ಮ ಅಭಿಪ್ರಾಯದಂತೆಯೇ ನಿಯಮಗಳಿರುತ್ತವೆಯೇನು ? ಸ್ವಮತಪರಮತ ತತ್ತ್ವಾಂಧರಾದ ನಿಮಗೆ ಹೆಚ್ಚಿಗೆ ಹೇಳುವುದೇನದೆ ? "ಆಚಾರ್ಯ ಕುಲಾದ್ವೇದಮಧೀತ್ಯ" "ಸ್ವಶಾಖಾಧ್ಯಯನಪೂರ್ವಕಂ ಸರ್ವ ವಿದ್ಯಾಭ್ಯಾಸಂ ಕೃತ್ವಾ ಸ್ವಾಭಿಮತೈಕಗುರುಸಮೀಪೇ" ಇತ್ಯಾದಿ ಛಾಂದೋಗ್ಯ ನಾರದಪರಿವ್ರಾಜಕಶ್ರುತಿಗಳೆಲ್ಲವೂ ತಮ್ಮ ತಮ್ಮ ಶಾಖಾನುಸಾರವಾಗಿ ತಮ್ಮ ಗುರುಗಳಲ್ಲಿಯೇ ಬ್ರಹ್ಮತತ್ತ್ವವನ್ನು ತಿಳಿದುಕೊಂಡದ್ದಾದರೆ ಅವನು ಮುಕ್ತನಾಗುತ್ತಾನೆಂದು ಸಾರಿಸಾರಿ ಹೇಳುತ್ತವೆ. ಅಂದಮೇಲೆ ಈ ಸಮಸ್ತ ವೇದವಾಕ್ಯಗಳಿಗೆ ಬರೆಯನ್ನು ಹಾಕುವಿರೋ ! ಅದಕ್ಕಾದರೂ ತಯಾರಾಗುವವರಿದ್ದರೆ ಆಗಿ ಕುಂಬಳರಾಜನ್ನ ಕೈಕೆಳಗೆ ಅವನ ಮಂತ್ರಿಯಾಗಿ ಕಾರಭಾರವನ್ನು ನಡೆಯಿಸಿರಿ. ಅಂದರೆ ಭೂಷಣವು ! ಇರಲಿ ;

ತ್ವಯಾ ಪ್ರೋಕ್ತಾಶ್ಚ ಭಗವನ್ ಪಂಚಪೀಠಾಧಿದೇವತಾಃ ।
ಸ್ವತಂತ್ರಾ ಮುಖ್ಯಗುರವೋ ಮಹಾಂತಾಶ್ಚೇತಿವಿಶ್ರುತಾಃ ॥

ಇತ್ಯಾದಿ ಸುಪ್ರಬೋಧಾಗಮ ವಾಕ್ಯಗಳಿಂದ ಮಹಾಚಾರ್ಯರಲ್ಲಿಯೇ ಮುಖ್ಯ ಗುರುತ್ವವೂ ಸ್ವತಂತ್ರತ್ವವೂ ಸಿದ್ಧಿಸುವುದಲ್ಲದೆ ಗುರುತ್ವಶೂನ್ಯರಾದ ವಿರಕ್ತರಲ್ಲಿ ಮುಖ್ಯ ಗುರುತ್ವವನ್ನು ಕಲ್ಪಿಸುವುದು ಕೇವಲ ಹಾಸ್ಯಾಸ್ಪದವೇ ಸರಿ ! ಜಗದ್ಗುರು ಪಂಚಾಚಾರ್ಯರಿಗೆ ನಮ್ಮ ಶಾಸ್ತ್ರಗಳು ಸಾಮಾನ್ಯ ಗುರುಗಳೆಂದು ಬರೆದಿರುತ್ತಾರೆ.

ಮತ್ಪಂಚವದನೋದ್ಭೂತಾಃ ಸರ್ವಏವ ಗುರೂತ್ತಮಾಃ ।
ತತ್ಸೃಷ್ಟಾನಾಂಚಸರ್ವೇಷಾಂ ತತ್ಸಾಮರ್ಥ್ಯಂ ಕಥಂಭವೇತ್ ॥
ತಸ್ಮಾತ್ಪಂಚವಿಧಾಚಾರ್ಯಾಃ ಪಂಚಪೀಠಾಧಿದೇವತಾಃ ।
ಪಂಚಸಿಂಹಾಸನಾಧೀಶಾ ಜಗದ್ಗುರುತಮಾಶ್ಚ ತೇ ॥

ಪಂಚಾನಾಂಚ ಮಹಾರ್ಯಾಣಾಂ ತಚ್ಛಿಷ್ಯಾಣಾಂ ತಥೈವಹಿ ।
ಸಾಮಾನ್ಯಭಾವತಃ ಪೂಜಾಂ ಯೇ ಕುರ್ವಂತಿ ನರಾಧಮಾಃ ॥
ಪೂಜಾಕರ್ತಾ ಪೂಜಿತಶ್ಚ ನರಕಾನೇವ ವಿಂದತೇ ॥
ಪಂಚಪೀಠಾಧಿದೇವಾನಾಂ ಯೇ ಜಾನಂತಿ ಸಮಾನತಾಂ ।
ತೇ ಗರ್ದಭಾಶ್ಚ ಸಂಪ್ರೋಕ್ತಾ ಜ್ಞಾನಶೂನ್ಯತ್ವತಃ ಶಿವೇ ॥

ಇತಿ ಸುಪ್ರಬೋಧಾಗಮೇ.

ಅಂದರೆ ನನ್ನ ಐದೂಮುಖಗಳಿಂದ ಜನಿಸಿದ ಪಂಚಾಚಾರ್ಯರೇ ಮುಖ್ಯಗುರುಗಳಿರುತ್ತಾರೆ. ಅವರಿಂದ ನಿರ್ಮಿತರಾದ ಸರ್ವರಿಗೆ (ಸರ್ವ ತರಹದ ವೀರಶೈವರಿಗೆ) ಅವರ ಸಾಮರ್ಥ್ಯವು ಹೇಗೆ ಬಂದೀತು? ಆದ ಕಾರಣ ಪಂಚಪ್ರಕಾರರಾದ ಆಚಾರ್ಯರು ಪಂಚಪೀಠಗಳಿಗೆ ಅಧಿದೇವ ತೆಗಳೂ ಪಂಚ ಸಿಂಹಾಸನಗಳಿಗೆ ಅಧಿಪತಿಗಳೂ ಜಗದ್ಗುರುಗಳೂ ಆಗು ತ್ತಾರೆ. ಇಂಥ ಜಗದ್ಗುರು ಪಂಚಾಚಾರ್ಯರನ್ನೂ ಅವರ ಶಿಷ್ಯರಾದ ಗುರುಸ್ಥಲದವರನ್ನೂ ಸಾಮಾನ್ಯಗುರುಭಾವದಿಂದ ಯಾವ ನರಾಧ ಮರು ಪೂಜಿಸುತ್ತಾರೆಯೋ, ಪೂಜೆಯನ್ನು ಮಾಡುವವರೂ ಪೂಜಿಸ ಲ್ಪಟ್ಟವರೂ ನರಕವನ್ನು ಹೊಂದುತ್ತಾರೆ. (ಇಂಥ ಅಧಮರ ಪೂಜೆ ಯನ್ನು ಆಚಾರ್ಯರು ಎಂದೂ ಗ್ರಹಿಸಕೂಡದೆಂದೇ ಪರಮೇಶ್ವರನ ಅಭಿಪ್ರಾಯವು.) ಪಂಚಸಿಂಹಾಸನಾಧಿಪತಿಗಳಿಗೆ ಜ್ಞಾನವಿಲ್ಲದೆ ಯಾರು ಅವರೂ ನಾವೂ ಸಮಾನರೆಂದು ತಿಳಿಯುತ್ತಾರೆಯೋ ಅವರಿಗೆ ಕತ್ತೆಗ ಳೆಂದೆನ್ನಬೇಕು. ಎಂದು ಪರಮೇಶ್ವರನು ಪಾರ್ವತಿಗೆ ಉಪದೇಶಿಸಿ ದ್ದಾನೆ. (ಸಮಾನರೆಂದು ತಿಳಿದರೆ ಕತ್ತೆಗಳೆಂದು ಅನ್ನುವಾಗ ಅವರಿ ಗಿಂತ ಹೆಚ್ಚೆಂದು ಉಚ್ಚರಿಸುವ ಮಹಾಶಯರು ಯಾವ ವರ್ಗದಲ್ಲಿ ಸೇರ ಬಹುದೆನ್ನುವುದನ್ನು ವಾಚಕರೇ ಊಹಿಸಬಹುದು.) ಈ ಶಾಸ್ತ್ರಿಗಳು ತಮ್ಮ ಪತ್ರಿಕೆಯಲ್ಲಿ—

" ಕಾವ್ಯತೀರ್ಥರು ಸಿದ್ಧಾಂತಶಿಖಾಮಣಿಯ ವ್ಯಾಖ್ಯಾನದಲ್ಲಿ ಮಂತೋಂಟ ದಾರ್ಯರು ಗುರುಶಬ್ದದಿಂದ ರೇಣುಕಾದಿಪಂಚಾಚಾರ್ಯರನ್ನು ಜಗದ್ಗುರುಗಳೆಂದು ವ್ಯವಹರಿಸಿರುವರೆಂದು ಹೇಳಿರುವರು. ಶ್ರೀ ರೇಣುಕಾದಿಗಳು ಭೂಲೋಕದಲ್ಲಿ ಅವ ತಾರ ಮಾಡುವದಕ್ಕಿಂತ ಮೊದಲು "ಯಥಾ ಮೇ ಮಾನುಷೋ ಭಾವೋ ನ ಭವೇತ್ ಕ್ಷಿತಿಮಂಡಲೇ | ತಥಾ ಪ್ರಸಾದಂ ದೇವೇಶ ವಿಧೇಹಿ ಕರುಣಾನಿಧೇ | ಅಸ್ಪೃಶನ್ ಮಾನುಷಂಭಾವಂ ಲಿಂಗಾತ್ಪ್ರಾದುರ್ಭವಿಷ್ಯಸಿ ||" ಮೊದಲಾದ ಸಿದ್ಧಾಂತಶಿಖಾ ಮಣಿಯ ಉದಾಹರಣೆಗಳಿಂದ ರೇಣುಕಾದಿಗಳಿಗೆ ಮನುಷ್ಯಭಾವವಿಲ್ಲದೆ ಅವರು ಕೇವಲ ದಿವ್ಯಶರೀರಿಗಳೆಂದು ಗೊತ್ತಾಗುವುದು. ತೋಂಟದಾರ್ಯರು ಪಂಚಾಚಾ ರ್ಯರಲ್ಲಿ ಗುರುತ್ವವನ್ನು ಒಪ್ಪಿಕೊಂಡಿರುವದು ದಿವ್ಯಶರೀರನಿಮಿತ್ತವಾದದ್ದೇ ಹೊರತು ತಮ್ಮಲ್ಲಿ ಶಿಷ್ಯಭಾವವನ್ನು ಪ್ರಕಟಿಸುವದಕ್ಕೋಸುಗ ಅಲ್ಲವು. ತೋಂಟದಾರ್ಯರು ಮಹಾತ್ಮರಾದ ಲಿಂಗಧಾರಣವಿಲ್ಲದವರನ್ನೂ ಸ್ತುತಿಸಿರುವರು. ಆದುದರಿಂದ ಅವರ ಮಹತ್ತ್ವವಂ ತೋರಿಸುವದು ಅವರ ಅಭಿಪ್ರಾಯವೇ ಹೊರತು ತಮ್ಮಲ್ಲಿ ಶಿಷ್ಯಭಾವ ಸ್ಥಾಪನೆಗಾಗಿ ಆ ವಚನವನ್ನು ಪ್ರಯೋಗಿಸಿಲ್ಲ" ಎಂದು ಬರೆದಿರುತ್ತಾರೆ.

ಆದರೆ ಸಿದ್ಧಾಂತಶಿಖಾಮಣಿಯ ಆಧಾರದಿಂದ ಈ ಶಾಸ್ತ್ರಿಗಳು ಜಗದ್ಗುರುಗಳಲ್ಲಿ ತೇಜಃಶರೀರತ್ವವನ್ನೂ ತನ್ಮೂಲಕ ಪರಮಗುರುತ್ವ ವನ್ನೂ ಒಪ್ಪಿರುವುದು ಯಥಾರ್ಥವಿರುತ್ತದೆ. ಆದರೆ ತೋಂಟದಾರ್ಯರು ಶಿಷ್ಯಭಾವದಿಂದ ಅವರನ್ನು (ಶ್ರೀ ರೇಣುಕಾದಿಗಳನ್ನು) ಸ್ತುತಿಸಿರುವ ದಿಲ್ಲ; ಇವರು ಆಚಾರ್ಯರನ್ನಲ್ಲದೆ ಅನ್ಯಮತದವರನ್ನೂ ಕೂಡ ಸ್ತುತಿಸಿದ್ದಾರೆ ಎಂದು ಬರೆಯುವುದು ತಪ್ಪಾದ ಮಾತಾಗಿರುತ್ತದೆ. ಯಾಕಂದರೆ—ತೋಂಟದಾರ್ಯರು ಅನಾದಿತೋಂಟದಸಿದ್ಧಲಿಂಗೇಶ್ವರನ ಪುರಾಣವನ್ನು ಬರೆದಿರುತ್ತಾರೆ. ಆ ಪುರಾಣದಲ್ಲಿ ತೋಂಟದಸಿದ್ಧೇಶ್ವರರು ಓಪೇಶ್ವರಕ್ಕೆ ಹೋದಕಾಲಕ್ಕೆ ಅಲ್ಲಿ ಕೆಲವು ಕುಟಿಲಸಿದ್ಧರು ಇವರಿಗೆ ಮಾಟವನ್ನು ಮಾಡಿದ್ದಾರೆ; ಆಗಿನ ಕಾಲಕ್ಕೆ ನಮಗೆ ನಿಮ್ಮ ಮಾಟವು ತಗಲುವುದಿಲ್ಲ; ಹಿಂದಕ್ಕೆ ಕೊಲ್ಲಾಪುರದಲ್ಲಿ ರೇವಣಾರಾಧ್ಯರಿಗೆ ಗೋರ ಕ್ಷನಾಥನೆಂಬವನು ಇದೇ ಪ್ರಕಾರವಾಗಿ ಮಾಡಿದ್ದನೆಂಬ ಕಥೆಯನ್ನು

ಹೇಳಿದ ವರ್ಣನವನ್ನು ಮರಿತೋಂಟದಾರ್ಯರು ಬರೆದಿರುತ್ತಾರೆ. ಈ ಜಗದ್ಗುರುಗಳಿಗೆ ಸಿದ್ಧೇಶ್ವರರು "ಪರಮಗುರು" "ಗುರು" "ಜಗದೇಕವಲ್ಲಭ" ಮೊದಲಾದ ಶಿಷ್ಯಭಾವದ್ಯೋತಕ ವಿಶೇಷಣಗಳನ್ನು ಕೊಟ್ಟು ಸ್ತುತಿಸಿದಂತೆ ಬರೆದಿದ್ದಾರೆ. ಉಳಿದವರಿಗೆ ಈ ತರಹದ ಪೂಜ್ಯ ವಿಶೇಷಣಗಳನ್ನು ಕೊಟ್ಟು ಎಲ್ಲಿಯೂ ಬರೆದಿಲ್ಲ. ಸಿದ್ಧೇಶ್ವರಪುರಾಣದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರ ಚರಿತ್ರದಂತೆ ಅಲ್ಲಮನ ಹಾಗೂ ಸಿದ್ಧರಾಮನ ಚರಿತ್ರಗಳನ್ನಾದರೂ ತೋಂಟದಾರ್ಯರು ಬರೆದಿರುವರು. ಆದರಲ್ಲಿ ಇವರಿಬ್ಬರಿಗೂ ಇಂಥ ಮಹತ್ವವಿಶೇಷಣಗಳನ್ನು ಪ್ರಯೋಗಿಸಿಲ್ಲ. ಸಿದ್ಧೇಶ್ವರಪುರಾಣದ ೫ನೆಯ ಸಂಧಿಯಲ್ಲಿ :—

ಪರಮಗುರು ರೇವಣಾಸಿದ್ಧಯತಿರಾಯನುರು ।
ತರಹರ್ಷದಿಂದೆ ಕೊಲ್ಲಾಪುರಕ್ಕೈತರಲ್ ।
ದುರುಳರೆನಿಸುವ ಜೋಗಿಗಳು ವಜ್ರೋಗಮನದೃಷ್ಟಿಸ್ತಂಭಗಳ
ನೆಸಗಲು ॥

ನಿರುತದಿಂದಾಸ್ತಂಭಗಳು ತಾಗದಿರೆ ಯುಗರ್ವ ।
ಳಿರದೆ ಗೋರಕ್ಷನೆಡೆಗೈದಿ ಕೇಳುತ್ತಿರಲು ।
ಪರಿಕಿಸದೆಯಾತನರಮನೆಗೈದುತಂಗಣದೊಳಗೆ ಸಂಭ್ರಮಿ
ಸುತೆ ॥೧೩॥

ಕುಟಿಲಸಿದ್ಧರುಗಳೆರ್ದೆ ದಲ್ಲಣಗೆ ಭಿಕ್ಷವತಿ ।
ಪಟುತರಪರಾಕ್ರಮಿಗೆ ಭಿಕ್ಷ ನಿಜಲಿಂಗ ಸಂ ।
ಘಟಿತಂಗೆ ಭಿಕ್ಷ ನವನಾಥಸಿದ್ಧರುಗಳಧಿನಾಥಂಗೆ ಭಿಕ್ಷ ಭಿಕ್ಷಾ ॥
ಚಟುಲತರನೆನಿಪ ಕೊಲ್ಲಾಪುರದೊಳಿಹ ಸಿದ್ಧ ।
ರಟಮಟಿಕೆ ಸಿಲ್ಕದಾತಗೆ ಭಿಕ್ಷ ಜನನಿಯುರು ।
ಜಠರದೊಳ್ ಬಾರದಾತಗೆ ಭಿಕ್ಷ ನಿಟಲನೇತ್ರಗೆ ಭಿಕ್ಷವೆಂದೆನು
ತಿರೆ ॥೧೪॥

ಗೋರಕ್ಷ ತನ್ನ ಮನದೊಳಗೆ ಕುಳ್ಳಿರ್ದುಭ್ಭಿ ।
ಕ್ಕಾರವವ ಕೇಳಿ ಪಲ್ಕೊರೆದು ಘುಡಿಘುಡಿಸಿ ಬಹ ।
ಳಾರುಭಟೆಯಿಂದೆ ಘೂರ್ಮಿಸಿ ಕೋಪದಿಂದೆ ಖಡ್ಗವ ಕಿರಿಯುರಸಿ
ಯೆನಿಸುವ ॥

ನಾರಿ ಲಕ್ಕಾದೇವಿಯಿಂದದಂ ಭಿಕ್ಷೆಯೆನು ।
ತೋರಂತೆ ನೀಡಿಸೆ ಕರದೊಳಾಂತು ನೋಡಲದು ।
ನೀರಂತೆ ಕರಗೆ ಪಾನಂಗೈಯ್ದನವನು ಗುರುರೇವಣಾ
ಸಿದ್ಧೇಂದ್ರನು ॥೧೫॥

ಉಲ್ಲಾಸದಿಂ ರೇವಣಾಸಿದ್ಧಯತಿರಾಯ ।
ನಿಲ್ಲಿ ಪಾನಂಗೈಯ್ಯಲಾ ಸುರಗಿ ಜೋಗಿಯರ್ದೆ ।
ಯಲ್ಲಿ ಕೀಲಿಸಿ ಬೆನ್ನೊಳಗೆ ನಟ್ಟುಗಿಯಲಂಜಿ ಹಿರಿಯ
ಲಕ್ಕಾದೇವಿಯು ॥

ನಿಲ್ಲದಾಕ್ಷಣ ಕರೆದು ನೀನುಸಿರ್ದ ಬುದ್ಧಿಗಳ ।
ನುಲ್ಲಂಘಿಸಿದೆನು ತಳುವದೆಯೂಯತಿಯ ಚರಣ ।
ದಲ್ಲಿ ಬೀಳ್ದಿನ್ನ ರಕ್ಷಿಸುವಂತೆ ಮಾಡೆಂದು ಕಳುಪಿದಂ
ನಿಜಸತಿಯನು ॥೧೬॥

ಆಕೆಯಾಕ್ಷಣದೆ ಪಾಲ್ಗಡಲ ಕುವರಿಯು ಮುದದಿ ।
ನಾಕರ್ಷಣಂ ಗೈದೊಡಂಗೊಂಡು ಬಂದು ಜಗ ।
ದೇಕವಲ್ಲಭನೆನಿಪ ರೇವಣಾಸಿದ್ಧೇಂದ್ರನಡಿಗೆ ವಂದನೆಯಮಾಡಿ॥
ಸಾಕು ನಿನ್ನಯ ವಿನೋದಂ ದೇವ ರಕ್ಷಿಸು ಕೃ ।
ಪಾಕರ ಎನಲ್ಕೆ ಪಾನಂಗೈದ ರಸವನುಗು ।
ಳ್ದಾಕಠಾರವನುರದ ತಾಣದಿಂ ಜಗುಳ್ದು ಬೀಳ್ವಂತೆ ಮಾಡಿದ
ನಾಗಳು ॥೧೭॥

ಮತ್ತು ಮರಿತೋಂಟದಾರ್ಯರು ತಮ್ಮಿಂದ ರಚಿಸಲ್ಪಟ್ಟ ವೀರ ಶೈವಪ್ರದೀಪಿಕೆಯೆಂಬ ಗ್ರಂಥದಲ್ಲಿ—

" ಮತ್ತಂಚತುಃಷಷ್ಟಿ ಶೀಲಾಚಾರಧುರಂಧರರಾದ ಪಾಲ್ಕುರಿಕೆ ಸೋಮನಾಥರಿಂದುಕ್ತಮಾದ ಶ್ರೀಮದ್ಬಸವರಾಜೀಯವೆಂಬ ಗ್ರಂಥದ ಲ್ಲಿಯೂ, ಸಮಸ್ತ ತತ್ತ್ವವೇತ್ತರಾದ ಪದ್ಮರಾಜರಿಂದುಕ್ತಮಾದ ಸಾನಂದ ಚರಿತ್ರವೆಂಬ ಗ್ರಂಥದಲ್ಲಿಯೂ, ಸಕಲ ಶೈವಾಗಮಾಭಿಜ್ಞರಾದ ಜ್ಯೋತಿ ರ್ನಾಥರಿಂದುಕ್ತಮಾದ ಶೈವರತ್ನಾಕರವೆಂಬ ಗ್ರಂಥದಲ್ಲಿಯೂ, ನೀಲ ಕಂಠ ನಾಗನಾಥಾಖ್ಯ ದೇಶಿಕರಿಂದುಕ್ತಮಾದ ವೀರಮಾಹೇಶ್ವರಾಚಾರ ಸಂಗ್ರಹವೆಂಬ ಗ್ರಂಥದಲ್ಲಿಯೂ, ಸಾಕ್ಷಾದ್ವೀರಶೈವಮತೋತ್ಪಾದಕರಾದ ಶ್ರೀ ಜಗದ್ಗುರು ರೇಣುಕಾಚಾರ್ಯರಿಂದುಕ್ತಮಾದ ಸಿದ್ಧಾಂತಶಿಖಾಮಣಿ ಯೆಂಬ ಗ್ರಂಥದಲ್ಲಿಯೂ, ಇನ್ನೂ ಅನೇಕ ಗ್ರಂಥಗಳಲ್ಲಿಯೂ ಅನುಕ್ತ ವಾದುದರಿಂದ ಸತ್ಪುರುಷರಿಂದ ಅನಾದರಿಸಲ್ತಕ್ಕದೆಂಬುದೇ ಸಿದ್ಧ ಮಕ್ಕುಂ "

ಎಂದು ಬರೆದಿರುತ್ತಾರೆ. ಇದರಲ್ಲಿ ಶ್ರೀ ರೇಣುಕಾಚಾರ್ಯರಿಗೆ ತಮ್ಮ ಅಸಾಧಾರಣ ಗುರುಭಕ್ತಿಯಿಂದ " ಜಗದ್ಗುರು " ಪದವನ್ನು ಪ್ರಯೋಗಮಾಡಿ ತೋರಿಸಿದ್ದಾರೆ. ಇವರಲ್ಲದೆ ಈ ವಿರಕ್ತರ ಮೂಲ ಪುರುಷರಾದ ಅನಾದಿ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ವಚನದಲ್ಲಿ ಶ್ರೀ ರೇಣುಕಾದಿಪಂಚಾಚಾರ್ಯರ ನಾಲ್ಕೂ ಯುಗಗಳಲ್ಲಿ ಪ್ರಸಿದ್ಧಗಳಾದ ಹೆಸರುಗಳನ್ನು ತೆಗೆದುಕೊಂಡು ಅವರಲ್ಲಿ ಅಸಾಧಾರಣವಾದ ಭಕ್ತಿ ಯನ್ನು ತೋರಿಸಿದ್ದಾರೆ. ಆ ವಚನಂಗಳೆಂತೆಂದೊಡೆ—

ನಂದೀಶ್ವರ ಭೃಂಗೀಶ್ವರ ವೀರಭದ್ರ ದಾರುಕ ರೇಣುಕ ಶಂಕುಕರ್ಣ ಗೋಕರ್ಣ ಏಕಾಕ್ಷರತ್ರ್ಯಕ್ಷರ ಚತುರಕ್ಷರ ಪಂಚಾ ಕ್ಷರ ಷಡಕ್ಷರ ಸದಾಶಿವ ಈಶ್ವರ ಮಹೇಶ್ವರ ರುದ್ರ ಘಂಟಾ ಕರ್ಣ ಗಜಕರ್ಣ ಏಕಮುಖ ದ್ವಿಮುಖ ತ್ರಿಮುಖ ಚತುರ್ಮುಖ

ಪಂಚಮುಖ ಷಣ್ಮುಖ ಶತಮುಖ ಸಹಸ್ರಮುಖ ಮೊದಲಾದ ಗಣಾಧೀಶ್ವರರು ನಿತ್ಯಪರಿಪೂರ್ಣರಾಹಂತ ಪರಶಿವ ತತ್ತ್ವದಲ್ಲಿ ಜ್ಯೋತಿಯಲ್ಲಿ ಜ್ಯೋತಿಯುದಯಿಸುವಂತೆ ಉದಯಿಸಿ ಶುದ್ಧ ಚಿದ್ರೂಪರಪ್ಪ ಪ್ರಮಥರು ಅನಾದಿಮುಕ್ತರಲ್ಲ ಅವಾಂತರ ಮುಕ್ತರೆಂಬ ಅವಲಕ್ಷಣ ನಾಯಿ ನಾಲಿಗೆ ಹದಿನೆಂಟು ಜಾತಿಯ ಕೆರಹಿನಟ್ಟೆಗೆ ಸರಿಯೆಂಬೆ । ಆ ಶ್ವಾನಜ್ಞಾನಿಗಳ ಶೈವಪಶುಮತ ವಂತಿರಲಿ ಅವರ ಆಗಮವಂತಿರಲಿ ನಿಮ್ಮ ಶರಣರಿಗೆ ನಿಮಗೆ ಬೇರೆಮಾಡಿ ಸಂಕಲ್ಪಿಸಿ ನುಡಿವ ಅಜ್ಞಾನಿ ಹೊಲೆಯರ ಎನ ಗೊಮ್ಮೆ ತೋರದಿರಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ ॥ ಮತ್ತು—

ಆದಿಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯನಾಗಿರ್ದರೆ ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೊ । ಆ ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು ಅನಾದಿ ಮುಕ್ತನಲ್ಲ ಅವಾಂತರಮುಕ್ತನೆಂಬ ಅಜ್ಞಾನಿಗಳಿಗೆ ನಾಯಕ ನರಕ ತಪ್ಪದು । ಸಕಲಕೋಟಿ ಬ್ರಹ್ಮಾಂಡಕ್ಕಾಧಾರ ಸಮಸ್ತ ಲೋಕಂಗಳ ಪವಿತ್ರಕಾರಣವಾಗಿಯು ಪರಮೇಶ್ವರನ ನಿಜ ಚಿನ್ಮಯವಪ್ಪ ಊರ್ಧ್ವ*ಮುಖದಲ್ಲಿ ಚಿತ್ಕಲಾಸ್ವರೂಪರಪ್ಪ ರುದ್ರಗಣಂಗಳುದಯವಾದರು ನೋಡ । ಆ ರುದ್ರಗಣಂಗಳು ಮತ್ತು ಜಗತ್ಪಾವನಕಾರಣಮರ್ತ್ಯದಲ್ಲಿ ಅವತರಿಸಿದರು. ಅದೇ ನುಕಾರಣ ಉದಯವಾದರುವಾಗಿ ಸಗುಣವಿಲ್ಲದೆ ಎಂದು ಸಂದೇ ಹಿಸುವ ನಾಯಿನಾಲಿಗೆಯ ಯಮದೂತರು ಕೀಳದೆಮಾಣರೇ ।

---

* ಟಿಪ್ಪಣಿ—ಪರಮೇಶ್ವರನ ಊರ್ಧ್ವಮುಖದಲ್ಲಿ ಜನಿಸಿದವರು ವೀರ, ನಂದಿ, ಭೃಂಗಿ, ವೃಷಭ, ಸ್ಕಂದರೆಂಬ ಗೋತ್ರಪುರುಷರು ಹಾಗೂ ವಿಶ್ವಾರಾಧ್ಯರು.

ಇವರಿಗೆ ನಾಯುಕನರಕ ತಪ್ಪದು । ಕಾಣು । ಎಲೇ ಶಿವನೇ ನೀ ಸಾಕ್ಷಿಯಾಗಿ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ ॥

ಇವೆಲ್ಲ ವಿಷಯುಗಳನ್ನು ನೋಡುತ್ತಿರಲಿಕ್ಕೆ ಶ್ರೀ ಜಗದ್ಗುರು ರೇಣುಕಾಚಾರ್ಯಾದಿಪಂಚಾಚಾರ್ಯರಲ್ಲಿ ಅನಾದಿತೋಂಟದ ಸಿದ್ಧೇಶ್ವರರು ಎಷ್ಟು ಅಸಾಧಾರಣವಾದ ಭಕ್ತಿಯನ್ನು ತೋರಿಸಿದ್ದಾರೆನ್ನುವದು ಸರ್ವರಿಗೂ ಕನ್ನಡಿಯಂತೆ ತೋರಿಬರುತ್ತದೆ. ಈ ಮಹಿಮರು ಕ್ರಿ. ಶ. ೧೫ ನೆಯ ಶತಮಾನದಲ್ಲಿದ್ದರು. ಇವರ ಸಮಾಧಿಯು ಮೈಸೂರಿಗೆ ೫೦ ಮೈಲುದೂರದಲ್ಲಿರುವ ಎಡೆಯೂರು ಎಂಬ ಗ್ರಾಮದಲ್ಲಿ ಉಂಟು. ಇವರ ಸಮಾಧಿ ಸ್ಥಾನವು ಬಹು ರಮಣೀಯವಾಗಿರುತ್ತದೆ. ಇವರ ಸಮಾಧಿಯಿದ್ದ ದೇವಸ್ಥಾನದ ಶಿಖರದ ಮೇಲ್ಭಾಗದಲ್ಲೆಲ್ಲ ಶ್ರೀ ಜಗದ್ಗುರು ರೇಣುಕಾಚಾರ್ಯರ ಪುರಾಣದಲ್ಲಿ ವರ್ಣಿಸಿದ ಯಾವತ್ತು ಲೀಲೆಗಳು ಮೂರ್ತಿಗಳಾಗಿ ಮಾಡಲ್ಪಟ್ಟಿರುತ್ತವೆ. ಸರ್ವರೂ ಪ್ರತ್ಯಕ್ಷವಾಗಿ ಅಲ್ಲಿಗೆ ಹೋಗಿ ನೋಡಿ ಅನುಭವವನ್ನು ತೆಗೆದುಕೊಳ್ಳಬಹುದು.

ಕ್ರಿ. ಶ. ೧೭೭೯ ರಲ್ಲಿ ಹೈದರ ಅಲ್ಲಿಯಿಂದ ಸೆರೆಯಲ್ಲಿಡಲ್ಪಟ್ಟ ಮೆದಕೆರೆನಾಯಕನಿಂದ ಕಟ್ಟಿಸಿ ಸ್ಥಾಪಿಸಲ್ಪಟ್ಟ ಚಿತ್ರಕಲ್ಲುದುರ್ಗದ ವಿರಕ್ತಮಠಕ್ಕೆ ಅಧಿಕಾರಿಗಳಾದ ಗುರುಸಿದ್ಧಸ್ವಾಮಿಗಳೆಂಬವರು ಕನ್ನಡದಲ್ಲಿ ಹಾಲಾಸ್ಯ ಪುರಾಣವನ್ನು ಬರೆದಿರುತ್ತಾರೆ. ಅದರಲ್ಲಿ—

ನಂದಿ ಭೃಂಗಿ ವೃಷಂ ಮಹಾಗುರುರೇಣುಕಂ ವರದಾರುಕಂ ।
ಸುಂದರಂ ಕರಿಕಂಬನುಂ ಗಣನಾಥನುಂ ಸಿರಿಯಾಳ್ವನುಂ ॥
ಚಂದನುಂ ಬಸವೇಶನುಂ ಮಡಿವಾಳಮಾಚಯನುಂ ಸದಾ ।
ನಂದದಿಂ ಕೃಪೆಯಿಂದೆ ಮತ್ಕೃತಿಗೀಗೆ ಮಂಜುಳವಾಣಿಯಂ ॥

ಈ ಪ್ರಕಾರವಾಗಿ ಸ್ತುತಿಸಿರುತ್ತಾರೆ. ಇದರಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರಿಗೊಬ್ಬರಿಗೆಯೇ "ಮಹಾಗುರು" ಎಂದು ಪ್ರಯೋ

ಗವನ್ನು ಮಾಡಿ ತಮ್ಮ ಅಸಾಧಾರಣವಾದ ಶಿಷ್ಯತ್ವವನ್ನು ಪ್ರಕಟ ಮಾಡಿದ್ದಾರೆ. ಹಾಗೂ—

ದೀಕ್ಷೆಯನಿರದಿತ್ತಯ್ಯನ | ಸಕ್ಷಯ ಶಿಕ್ಷೆಯನಳುರ್ಕೆಯಿಂ
ದಿತ್ತವನಂ ||
ಪಕ್ಷದೆ ಸುಜ್ಞಾನದನಂ | ಲಕ್ಷಿಪೆನೀಕೃತಿಯ ಮೊತ್ತಮೊದ
ಲೊಳೆ ನಯದಿಂ || *

ಈ ಪದ್ಯದಿಂದ ತಮ್ಮ ದೀಕ್ಷಾಗುರುಗಳನ್ನು ಶಾಸ್ತ್ರಾನುಸಾರವಾಗಿ ಬಹುಭಕ್ತಿಯಿಂದ ಸ್ತುತಿಸಿದ್ದಾರೆ. ಇದಲ್ಲದೆ ದೀಕ್ಷಾಗುರುಗಳೇ ಶಿಕ್ಷಾಗುರು, ಮೋಕ್ಷಗುರು (ಜ್ಞಾನಗುರು) ಗಳಾಗುತ್ತಾರೆಂದು ತೋರಿಸಿದ್ದಾರೆ. ನೋಡಿರಿ? ಯಥಾರ್ಥಶಾಸ್ತ್ರಜ್ಞರ ಆಚರಣೆಯು ಹೀಗಿರುತ್ತದೆ. ಮಹಾತಪಸ್ವಿಗಳೂ ಜ್ಞಾನಿಗಳೂ ಜಿತೇಂದ್ರಿಯರೂ ಹಾಗೂ ಮಹಾ ವಿರಕ್ತರೂ ಆದ ಇವರೆಲ್ಲರೂ ಶ್ರೀರೇಣುಕಾದ್ಯಾಚಾರ್ಯರಲ್ಲಿಯೂ ಹಾಗೂ ತಮಗೆ ದೀಕ್ಷೆಯನ್ನು ಕೊಟ್ಟ ಗುರುಗಳಲ್ಲಿಯೂ ಅಸಾಧಾರಣವಾದ ಗುರುಭಕ್ತಿಯನ್ನು ತೋರಿಸಿ, ಶಿಷ್ಯರಾಗಿ ನಡೆದು ಹೋಗಿದ್ದಾರೆ. ಹೀಗಿದ್ದು ಅವರಂತೆ ಒಂದರಲ್ಲಿಯೂ ಕೂಡ ಸಮರ್ಥರಾಗದ ಈಗಿನ ಕೆಲವು ಸಣ್ಣಪುಟ್ಟ ಅಜ್ಞಾನಿ ವಿರಕ್ತರು ಶ್ರುತಿಗಳ ಅಭಿಪ್ರಾಯವನ್ನನು ಲಕ್ಷಿಸಿ ಆದರಂತೆ ವರ್ತಿಸದೆ ಅಥವಾ ತಮ್ಮ ಪೂರ್ವಜರ ಮಾರ್ಗವನ್ನಾದರೂ ಹಿಡಿದು ಆಚರಿಸದೆ ಮತಸ್ಥಾಪನಾಚಾರ್ಯರಲ್ಲಿಯೂ, ತಮಗೆ ದೀಕ್ಷೆಯನ್ನು ಕೊಟ್ಟ ಗುರುಗಳಲ್ಲಿಯೂ ಶಿಷ್ಯಭಾವವನ್ನು ಪ್ರಕಟಮಾಡದೆ ಉದ್ದಾಮತನದಿಂದ ಅವರಿಗೆ ಎದುರಾಗಿ ನಡೆಯಹತ್ತಿರುತ್ತಾರೆ. ಧಿಕ್ಕಾರ ! ಧಿಕ್ಕಾರ !! ಧಿಕ್ಕಾರ !!! ಹಾಯ್ ! ಪರಶಿವನೇ ! ನೀನಾದರೂ ಈ ಮಹಾಶಯರ ಮನಸ್ಸಿನಲ್ಲಿ ಹೊಕ್ಕು, ಜಗದ್ಗುರು ಭಕ್ತಿಯುಕ್ತರನ್ನಾಗಿ ಮಾಡಿ, ನಿನ್ನ ಶಾಸ್ತ್ರಕ್ಕಾದರೂ ಮರ್ಯಾದೆ

---

* ತ್ರಿವಿಧ ಗುರುತತ್ವ ವಿಷಯವು ಈ ಶ್ಲೋಕದಲ್ಲಿ ಅಡಕವಾಗಿದೆ.

ಯನ್ನು ತಂದುಕೊಳ್ಳಬಾರದೇ? ಎಲ್ಲಿಯವರೆಗೆ ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುವಿ? ಇನ್ನಾದರೂ ಸ್ವಲ್ಪ ಕಣ್ದೆರೆ? ಜಗತ್ತಿನ ಆಟವು ಎಷ್ಟು ಮನೋಹರವಾಗಿ ನಡೆದದೆ ಎನ್ನುವದನ್ನು ನೋಡು ; ಸರ್ವಜ್ಞನಾದ ನಿನಗೆ ಹೆಚ್ಚಿಗೆ ಪ್ರಾರ್ಥಿಸಿಕೊಳ್ಳುವದೇನದೆ? ಇರಲಿ;

ಹತ್ತನೆಯಶತಮಾನದಲ್ಲಿ ತಮ್ಮ ಅಸಾಧಾರಣಪಾಂಡಿತ್ಯದಿಂದ ಜಗದ್ವಿಖ್ಯಾತರಾದ ಹಾಗೂ ಗುರುಸ್ಥಲಶಿಖಾಮಣಿಗಳಾದ ಶ್ರೀಪತಿ ಪಂಡಿತರು "ಅಥಾತೋ ಬ್ರಹ್ಮಜಿಜ್ಞಾಸಾ" ಇತ್ಯಾದಿ ಬ್ರಹ್ಮಸೂತ್ರಗಳಮೇಲೆ ವೀರಶೈವ ಭಾಷ್ಯವನ್ನು ಶ್ರೀಕರಭಾಷ್ಯವೆಂಬ ಹೆಸರಿನಿಂದ ಬರೆದಿದ್ದಾರೆ. ಅವರು ತಮ್ಮ ಭಾಷ್ಯದ ಆದಿಯಲ್ಲಿ—

ಶ್ರೀಮಚ್ಛಿವಾಚಾರವಿಚಾರದೀಕ್ಷಂ ।
ಸ್ವಶಿಷ್ಯ ಸತ್ಪ್ರೀಣನಪೂರ್ಣಪಕ್ಷಂ ॥
ದುರ್ವಾರಕಾಮಾದಿವಿದಾರದಕ್ಷಂ ।
ಭಜಾಮ್ಯಹಂ ರೇವಣಕಲ್ಪವೃಕ್ಷಂ ॥

ಇತ್ಯಾದಿ ಶ್ಲೋಕಗಳಿಂದ ಪಂಚಾಚಾರ್ಯರನ್ನು ಸ್ತುತಿಸಿದ್ದಾರೆ. ಹಾಗೂ ಮೊದಲನೆಯ ಅಧ್ಯಾಯದ ಪ್ರಥಮಪಾದದ ಅಂತ್ಯದಲ್ಲಿ—

"ಇತಿ ಶ್ರೀಮನ್ನಿರಾಭಾರ ಯತಿವ್ರಜ ಪರೀವೃಢ ಶ್ರೀಪತಿ ಪಂಡಿತಭಗವತ್ಪಾದಾಚಾರ್ಯಕೃತ ದ್ವೈತಾದ್ವೈತಾಭಿಧಾನ ವಿಶೇಷಾದ್ವೈತಸಿದ್ಧಾಂತಸಂಸ್ಥಾಪಕವೈಯಾಸಿಕಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ ಸಮನ್ವಯಾಭಿಧಾನಸ್ಯ ಪ್ರಥಮಾಧ್ಯಾಯಸ್ಯೈಕಾದಶಾಧಿಕರಣಾವಚ್ಛಿನ್ನಾಥಾತೋ ಬ್ರಹ್ಮಜಿಜ್ಞಾಸೇತ್ಯಾದಿದ್ವಾತ್ರಿಂಶತ್ಸೂತ್ರಗತ ಪ್ರಥಮಪಾದಃ ಸಂಪೂರ್ಣಃ"

ಹೀಗೆ ತಮ್ಮ ಒಕ್ಕಣಿಕೆಯನ್ನು ಬರೆದುಕೊಂಡಿದ್ದಾರೆ. "ನಿರಾಭಾರ ಯತಿವ್ರಜಪರೀವೃಢ" ಎಂಬ ವಿಶೇಷಣವನ್ನು ಗುರುಸ್ಥಲ

ಶಿಖಾಮಣಿಗಳಾದ ಈ ಆಚಾರ್ಯರು ತಮಗೆ ಇಟ್ಟುಕೊಂಡಿರೋಣದರಿಂದ ಇವರಲ್ಲಿ ಎಷ್ಟೋಜನ ವಿರಕ್ತರು ಷಟ್ಸ್ಥಲ ಶಾಸ್ತ್ರವನ್ನು ಶಿಷ್ಯವೃತ್ತಿಯಿಂದ ಅಭ್ಯಾಸಮಾಡುತ್ತಿದ್ದರೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಎಲ್ಲ ವಿಚಾರಗಳಿಂದ ಪೂರ್ವದಲ್ಲಿ ವಿರಕ್ತರು ಈಗಿನ ವಿರಕ್ತರಂತೆ ದುರಭಿಪ್ರಾಯವನ್ನು ವಹಿಸದೆ ಆಚಾರ್ಯರ ಶಿಷ್ಯರಾಗಿ ಅವರಲ್ಲಿಯೇ ಮುಕ್ತಿಮಾರ್ಗದರ್ಶಕವಾದ ಷಟ್ಸ್ಥಲಜ್ಞಾನವನ್ನು ಪಡೆದುಕೊಂಡು ಮುಕ್ತರಾಗುತ್ತಿದ್ದರೆಂದು ಸ್ಪಷ್ಟವಾಗಿ ತೋರಿಬರುತ್ತದೆ. ಆದಕಾರಣ ಈಗಿನ ವಿರಕ್ತರಾದರೂ ಶಾಸ್ತ್ರದೋಷಕ್ಕಂಜಿ ದುರಭಿಮಾನವನ್ನು ಬಿಟ್ಟು ವೇದಾಗಮಗಳ ಅಭಿಪ್ರಾಯದಂತೆ ಆಚಾರ್ಯರ ಶಿಷ್ಯರಾಗಿ ಅವರಿಂದಲೇ ಉಪದೇಶವನ್ನು ಪಡೆದುಕೊಂಡು ಮುಕ್ತರಾಗತಕ್ಕದ್ದು. ಇದೇ ವೇದಾಗಮ ಮಾನ್ಯವಾದ ವೀರಶೈವಸಿದ್ಧಾಂತವು. ಈ ಸಿದ್ಧಾಂತಕ್ಕೊಳಪಟ್ಟವರೇ ಮುಕ್ತರು! ಮುಕ್ತರು!! ಮುಕ್ತರು!!! ಇದೇ ತತ್ತ್ವವನ್ನನುಸರಿಸಿ ಮರಿತೋಂಟದಾರ್ಯ ಅನಾದಿತೋಂಟದಸಿದ್ಧೇಶ್ವರಾದಿಗಳು ಆಚರಿಸಿದರಲ್ಲದೆ ಶ್ರುತ್ಯಾಗಮಾದಿಗಳಿಗೆ ವಿರುದ್ಧವಾದ ನಮ್ಮ ಶಾಸ್ತ್ರಿಮಹಾಶಯರ ಅಭಿಪ್ರಾಯದಂತೆ ಆಚರಿಸಲಿಲ್ಲ. ಇರಲಿ;

"ಈ ಪಂಚಾಚಾರ್ಯರೆಂಬವರು ಶಿವನ ಸಮೀಪದಲ್ಲಿದ್ದ ಪ್ರಮಥರೆಂತಲೂ ಜಂಗಮವು ಸಾಕ್ಷಾಚ್ಛಿವಸ್ವರೂಪವೆಂತಲೂ ಸಿದ್ಧಾಂತ ವಿರುವುದರಿಂದ ಗುರುಗಳೆಂಬ ಆಚಾರ್ಯರಿಗಿಂತಲೂ ಜಂಗಮರಲ್ಲಿಯ ಗುರುತ್ವವು ಅಧಿಕವಾದದ್ದು." ಎಂದು ಶಾಸ್ತ್ರಿಗಳು ಬರೆದಿರುತ್ತಾರೆ.

ಇದು ಸತ್ಯವು. ಆದರೂ ಇವರಲ್ಲಿ ಎರಡು ತಪ್ಪುಗಳು ಇರುತ್ತವೆ. ಅವು ಯಾವುವೆಂದರೆ—ಜಂಗಮರೆಂದರೆ, ವಿರಕ್ತರೆಂದು ತಿಳಿದುಕೊಂಡಿದ್ದಾರೆ; ಇದೊಂದು ತಪ್ಪು. ಹಾಗೂ ಪ್ರಮಥರಾದ ಪಂಚಾಚಾರ್ಯರು ಶಿವಸ್ವರೂಪಿಗಳಲ್ಲವೆಂದು ತಿಳಿದುಕೊಂಡಿದ್ದಾರೆ; ಇದೊಂದು ತಪ್ಪು. ಮಹಾಶಯರೇ ಹೀಗೆ ತಿಳಿದುಕೊಳ್ಳಬಾರದು.

ಮನ್ಮುಖೋದ್ಭೂತಪಂಚಾರ್ಯಾಃ ಪಂಚಪೀಠಾಧಿಪಾಸ್ತಥಾ ।
ತ ಏವ ವೀರಶೈವಾನಾಂ ಪ್ರಶಸ್ಯಂತೇಽಧಿಕಾರಿಣಃ ॥
ಮದ್ರೂಪಾ ಅತಏವೈಷಾಮುಪಾರ್ಯಾಃ ಸೇವಕಾಮತಾಃ ॥

ಇತಿ ಸುಪ್ರಬೋಧಾಗಮೇ.

ತಸ್ಮಾತ್ತಸ್ಮಾಚ್ಚ ಗಿರಿಜೇ ಪಂಚಾನನಸಮುದ್ಭವಾಃ ।
ಮದಾದಿಸರ್ವಲೋಕಾನಾಂ ಜಗದ್ಗುರುವರೋತ್ತಮಾಃ ॥

ಇತಿ ಸುಪ್ರಬೋಧಾಗಮೇ.

ಅಂದರೆ ನನ್ನ ಮುಖಗಳಿಂದ ಜನಿಸಿದ ಪಂಚಪೀಠಾಧಿಪತಿಗಳಾದ ಪಂಚಾಚಾರ್ಯರು ವೀರಶೈವರಿಗೆ ಮುಖ್ಯ ಅಧಿಕಾರಿಗಳಾಗುತ್ತಾರೆ. ಅವರು ಕೇವಲ ನನ್ನ ಸ್ವರೂಪಿಗಳಾಗಿರುತ್ತಾರೆ ಆದಕಾರಣದಿಂದಲೇ ನನ್ನ ಐದು ಮುಖಗಳಿಂದ ಜನಿಸಿದ ಪಂಚಾಚಾರ್ಯರು ನನ್ನ ಲೋಕವನ್ನು ಮೊದಲು ಮಾಡಿಕೊಂಡು ಯಾವತ್ತು ಲೋಕಗಳಿಗೆ ಜಗದ್ಗುರುವರರು ಆಗಿರುತ್ತಾರೆಂದು ಸಾಕ್ಷಾತ್ಪರಶಿವನು ಪಾರ್ವತಿಯ ಮುಂದೆ ಈ ಜಗದ್ಗುರುಗಳ ವಿಷಯದಲ್ಲಿ ಇವೇ ಮೊದಲಾದ ಲಕ್ಷಾಂತರ ಶ್ಲೋಕಗಳಿಂದ ತನ್ನ ಸ್ವರೂಪಿಗಳೆಂದೂ ಜಗದ್ಗುರುಗಳೆಂದೂ ಅಪ್ಪಣೆಕೊಡಿಸಿರಲು, ಆ ಪರಶಿವನ ಮಹಾವಾಕ್ಯಗಳನ್ನು ಕಣ್ತೆರೆದು ನೋಡದೆ ನಮ್ಮ ಶಾಸ್ತ್ರಿ ಮಹಾಶಯರು ಹೀಗೆ ಬರೆದಿರುವುದು ಅವರ ಮತಗ್ರಂಥಾವಿಮರ್ಶತ್ವವನ್ನೇ ಪ್ರಕಟಿಸುತ್ತದೆ. ಮರಿತೋಂಟದಾರ್ಯರಿಂದ ರಚಿತವಾದ ವೀರಶೈವಾನಂದಚಂದ್ರಿಕೆಯಲ್ಲಿ "ಶಿಷ್ಯಾಣಾಂಚ ಗುರುರ್ಮಾತಾ ಗುರೋರ್ಮಾತಾಚ ಜಂಗಮಃ" ಇತ್ಯಾದಿ ಶ್ಲೋಕದ್ವಯದಿಂದ ಜಂಗಮಾಧಿಕ್ಯವನ್ನು ಹೇಳಿರುವುದು ಸತ್ಯವೇ ಇರುತ್ತದೆ. ಜಂಗಮರೆಂದರೆ ವಿರಕ್ತರಾಗುವುದಿಲ್ಲೆಂದು ಮೊದಲೇ ಅನೇಕ ಸಾಧಕಬಾಧಕಪ್ರಮಾಣಗಳಿಂದ ಸ್ಥಿರಗೊಳಿಸಲ್ಪಟ್ಟಿರುತ್ತದೆ.

"ಭೂರುದ್ರಾ ಜಂಗಮಾ ಲೋಕೇ ರೇಜಿರೇ ರೇಣುಕಾದಯಃ"

ಈ ಪ್ರಕಾರವಾಗಿ ವೀರಮಾಹೇಶ್ವರತಂತ್ರೋಕ್ತಿಯಂತೆ ಮಹಾ ಜಂಗಮರಾದ ಶ್ರೀಮದ್ರೇಣುಕಾದ್ಯಾಚಾರ್ಯರೇ ನಿತ್ಯಮುಕ್ತರೂ ತೇಜೋರೂಪಿಗಳೂ ಆಗಿರುವದರಿಂದಲೂ ಇವರಿಗೆ ಅನ್ಯರಂತೆ ಜನನಮರಣಾದಿಗಳು ಇಲ್ಲದೆ ಇದ್ದೋಣದರಿಂದಲೂ ಈ ಪ್ರಕಾರಗಳಾದ ಮಹತ್ತ್ವವಿಶೇಷಣಗಳು ಕೊಡಲ್ಪಟ್ಟಿರುತ್ತವೆ. ವಿರಕ್ತರ ಮೂಲಪುರುಷ ನೆಂದು ಅವರ ಕಡೆಯಿಂದಲೇ ಹೇಳಿಸಿಕೊಳ್ಳುವ ಅಲ್ಲಮನ ಉತ್ಪತ್ತಿಯು ಕೇವಲ ಅವರಿಗೆ ಅತ್ಯಂತ ಮಾನ್ಯವಾದ ಯಾರೋ ಒಬ್ಬರಿಂದ ರಚಿ ಸಲ್ಪಟ್ಟ ಸಂಸ್ಕೃತ ಪ್ರಭುಲಿಂಗ ಲೀಲೆಯ ೨ನೆಯ ಅಧ್ಯಾಯದಲ್ಲಿ ಒಬ್ಬಾನೊಬ್ಬ ಋಷಿಯು ಹಾಗೂ ಆವನ ಹೆಂಡತಿಯು ಪುತ್ರಸಂತಾನ ಕ್ಕೋಸ್ಕರ ಪರಮೇಶ್ವರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದರೆಂದೂ ಆವರಿಬ್ಬರ ಉದರದಿಂದ ಈ ಅಲ್ಲಮನು ಜನಿಸಿದ ನೆಂದೂ ಸ್ಪಷ್ಟವಾಗಿ ಬರೆಯಲ್ಪಟ್ಟಿರುತ್ತದೆ.

ಅಯಿ ಬಾಲಿಕೇ ಶೃಣು ಮುನಿಃ ಪುರಾ
ಪುರಾವಿದಬೋಧದೂರ ನಿಹಂಕ್ರಿಯಾಭಯಃ ।
ನಿಜಬೋಧಸಂಪದಭಿಧಾತ್ಮಭಾರ್ಯಯಾ
ಸುಚಿರಂ ಚಚಾರ ಪರಮಾದ್ಭುತಂ ತಪಃ ॥೨೫॥
ಪರಮಾತ್ಮರೂಪಸುತಕಾಂಕ್ಷಯಾಮಯಿ
ಸ್ಥಿರಭಕ್ತಿಭಾಜಿ ಸುಚಿರಂ ತಪಸ್ಯತಿ ।
ನಿರುಪಾಧಿಕೋಜ್ವಲತನುರ್ಮಮಾವ್ಯಯ
ಸ್ತನಯೋ ಬಭೂವ ದಯಿತೇಽಲ್ಲಮಸ್ತಯೋಃ ॥೧೨೬॥

ಈ ಆಧಾರಗಳಿಂದ ಅಲ್ಲಮನು ಋಷಿಗಳ ಉದರದಿಂದ ಜನಿಸಿದ ನೆಂದು ಸ್ಪಷ್ಟವಾಗಿ ತೋರುತ್ತದೆ. ಈ ವಿಷಯವು ಐತಿಹಾಸಿಕ ದೃಷ್ಟಿ ಯಿಂದಲೂ ಸತ್ಯವೆಂದು ತೋರಿಬರುತ್ತದೆ. "ಜಾತಸ್ಯ ಮರಣಂ

ಧ್ರುವಂ” ಎಂಬ ಶ್ರುತಿವಾಕ್ಯಾಭಿಪ್ರಾಯಕ್ಕನುಸಾರವಾಗಿ ಜನನ ದ್ವಾರಾ ಮರಣವಾದರೂ ಸಂಭವಿಸುತ್ತದೆ. ಆದರೆ ಜಗದ್ಗುರು ಪಂಚಾಚಾರ್ಯರ ಉತ್ಪತ್ತಿಯಾದರೂ ಲಿಂಗಗಳಿಂದಾಯಿತೆಂದು ಕಂಡುಬರುವದಲ್ಲ! ಎಂದು ಕೆಲವರು ಶಂಕಿಸಬಹುದು. ಹಾಗಲ್ಲ; ಯಾಕಂದರೆ— ಸರ್ವರಂತೆ ಆಚಾರ್ಯರು ಯೋನಿಜರಲ್ಲ. ಮಾರ್ಕಂಡೇಯನನ್ನುದ್ಧರಿಸುವುದಕ್ಕೋಸ್ಕರ ಪರಮೇಶ್ವರನು ಶಿವಲಿಂಗದಿಂದವತರಿಸಿ ಅಲ್ಲಿಯೇ ಅಡಗಿದಂತೆ ವೀರಶೈವ ಮತವನ್ನು ನೆಲೆಗೊಳಿಸುವುದಕ್ಕೋಸ್ಕರ ಶ್ರೀ ರೇಣುಕಾದಿಜಗದಾಚಾರ್ಯರು ದಿವ್ಯದೇಹಧಾರಿಗಳಾಗಿ ಸೋಮೇಶ್ವರಾದಿ ಲಿಂಗಗಳಿಂದವತರಿಸಿ, ಆ ಆ ಲಿಂಗಗಳಲ್ಲಿಯೇ ಅಡಗಿರುತ್ತಾರೆ. ಶಿವಲಿಂಗದಿಂದ ಪರಮಾತ್ಮನ ಜನನವು ನಿಮಿತ್ತ ಮಾತ್ರವಾಗಿ ತೋರಿಬಂದರೂ ಅವನು ಹೇಗೆ ಜನನದಿಂದ ದೂರನೋ, ಹಾಗೆಯೇ ಈ ಜಗದ್ಗುರುಗಳೆಂದು ತಿಳಿಯತಕ್ಕದ್ದು. ಜಗದ್ಗುರು ಪಂಚಾಚಾರ್ಯರಂತೆ ಅಲ್ಲಮನು ದಿವ್ಯದೇಹಧಾರಿಯಾಗಿ ಯಾವುದಾದರೊಂದು ಶಿವಲಿಂಗದಿಂದ ಜನಿಸಿ ಅಲ್ಲಿಯೇ ಅಡಗಿ ಶಿವಲೋಕಕ್ಕೆ ತೆರಳಿರುವುದು ಯಾವ ಆಧಾರಗಳ ಮೇಲಿಂದಲೂ ಕಂಡುಬರುವುದಿಲ್ಲ. ಹಿಂದಕ್ಕೆ ಕಲಚೂರ್ಯವಂಶದ ಬಿಜ್ಜಳನ ರಾಜಧಾನಿಯಾದ ಈಗ ನಿಜಾಮರಾಜ್ಯಕ್ಕೆ ಸೇರಿದ ಕಲ್ಯಾಣ ಪಟ್ಟಣದಲ್ಲಿ ಅಲ್ಲಮನ ಸಮಾಧಿಯು ನಮ್ಮ ಮತದವರ ಸಮಾಧಿಗಳಂತೆ ಆಗಿರುತ್ತದೆ. ಈಗ್ಯೂ ಆ ಸಮಾಧಿಯು ಅಲ್ಲಿ ಇದ್ದೇ ಇರುವುದು. ನೋಡಲಪೇಕ್ಷೆಯುಳ್ಳವರು ಅಲ್ಲಿ ಹೋಗಿ ನೋಡಿ ಯಾವತ್ತು ಐತಿಹಾಸಿಕ ವಿಷಯುಗಳನ್ನು ತಿಳಿಯಬಹುದು. ಇರಲಿ; ಇವರ ಮುಂದಿನ ಒಂದೆರಡು ಅಭಿಪ್ರಾಯಗಳಿಗೆ ಮೊದಲೇ ಉತ್ತರಗಳು ದೊರೆತಿರುತ್ತವೆ.

ಪ್ರಭುಲಿಂಗಲೀಲೆಯು ವ್ಯಾಸಕೃತ ಭವಿಷತ್ಪುರಾಣಾಂತರ್ಗತವೆಂದು ಮುದ್ರಣವಾಗಿರುತ್ತದೆ. ಹೀಗಿದ್ದು “ಯಾರೋ ಒಬ್ಬರಿಂದ ರಚಿಸಲ್ಪಟ್ಟ” ಎಂಬ ವಿಶೇಷಣವನ್ನು ಏಕೆ ಕೊಟ್ಟಿರಬಹುದೆಂದು

ನಮ್ಮ ಈ ಶಾಸ್ತ್ರಗಳೂ ಇವರ ಅನುಯಾಯಿಗಳೂ ಚಕಿತರಾಗಬಹುದು. ಮಹಾಶಯರೇ! ಪ್ರಭುಲಿಂಗಲೀಲೆಯು ವ್ಯಾಸಮಹರ್ಷಿಯಿಂದ ರಚಿಸಲ್ಪಟ್ಟಿಲ್ಲ; ಈ ಬಗ್ಗೆ ಅದೇ ಗ್ರಂಥದಲ್ಲಿಯೇ ಆಧಾರಗಳು ದೊರೆಯುತ್ತವೆ.

ವೀರೇಶ್ವರಾಂಘ್ರಿಭಜನಾಭಿರತಾ ಮುನೀಂದ್ರಾಃ
ಸಾರಂ ಕಥಾಸಮುದಯೇ ಪ್ರಮಥಾವತಾರಂ |
ವ್ಯಾಸೋಪದಿಷ್ಟಮಧಿಕೃತ್ಯ ವದಾಮಿ ಯೂಯಂ
ಶೃಣ್ವಂತು ಭಕ್ತರಸಿಕಾಃ ಪ್ರಭುಲಿಂಗಲೀಲಾಂ ||೧||

(೧ ನೆಯ ಅಧ್ಯಾಯ.)

ಈ ಪದ್ಯದಲ್ಲಿ "ವ್ಯಾಸೋಪದಿಷ್ಟಮಧಿಕೃತ್ಯ" ಎಂಬ ವಾಕ್ಯ ವಿಶೇಷಣದರಿಂದ ಈ ಗ್ರಂಥವನ್ನು ವ್ಯಾಸನಲ್ಲದೆ ಬೇರೊಬ್ಬನು ರಚಿಸಿದ್ದಾನೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ವ್ಯಾಸನೇ ರಚಿಸಿದ ಪಕ್ಷದಲ್ಲಿ (ವ್ಯಾಸನಿಂದ ಉಪದೇಶಿಸಲ್ಪಟ್ಟದ್ದನ್ನು ಮುಂದೆ ಮಾಡಿಕೊಂಡು) ಎಂದು ತನ್ನ ಹೆಸರನ್ನು ಭೂತಕೃದಂತ ವಿಶೇಷಣದಿಂದ ಯುಕ್ತವಾದದ್ದನ್ನಾಗಿ ಹೇಗೆ ಬರೆದುಕೊಳ್ಳುತ್ತಾನೆ? ಹಾಗೂ—

ಇಯಮಖಿಲಮುನೀಂದ್ರಾಃ ಶ್ರೀಗುರೋರ್ದಿವ್ಯಲೀಲಾ |
ಗಣಚರಿತವಿಶಾಲಾ ವ್ಯಾಸಮೌನಿಪ್ರಸಾದಾತ್ ||
ಹೃದಯಕಮಲವಾಸಿ ಶ್ರೀಮಹೇಶಾಜ್ಞಯೋಕ್ತಾ |
ಪ್ರಭವತು ಪತಿತ್ವಾಣಾಂ ಭೋಗಮೋಕ್ಷಾನುಕೂಲಾ ||೩೯||

(೨೫ ನೆಯ ಅಧ್ಯಾಯ.)

ಈ ಪದ್ಯದಲ್ಲಿಯಾದರೂ "ವ್ಯಾಸಮೌನಿಪ್ರಸಾದಾತ್" ಎಂಬ ವಾಕ್ಯವಿಶೇಷಣದರಿಂದ ಈ ಗ್ರಂಥವನ್ನು ವ್ಯಾಸನು ರಚಿಸಿಲ್ಲವೆಂದು ಕಂಡುಬರುತ್ತದೆ. ಈ ಗ್ರಂಥದ ಪ್ರಥಮಾಧ್ಯಾಯದಲ್ಲಿ—

ಸರ್ವಲೋಕ ಪ್ರಸಿದ್ಧೋಽಯಂ ಭಕ್ತಾಭೀಷ್ಟಾರ್ಥಸಿದ್ಧಿದಃ ।
ಸಿದ್ಧವೀರೇಶ್ವರೋ ನಾಮ್ನಾ ಕ್ಷಿತೌ ಪ್ರತ್ಯಕ್ಷತಾಂಗತಃ ॥೧೨೭॥

ಇತ್ಯಾದಿ ಶ್ಲೋಕಗಳಿಂದ ಸಿದ್ಧವೀರ ಗುರುವಿನ ವರ್ಣನೆಯು ವಿಶೇಷವಾಗಿರುತ್ತದೆ. ಹಾಗೂ ಪ್ರತ್ಯೇಕ ಅಧ್ಯಾಯದ ಆದಿಯಲ್ಲಿ ಸಿದ್ಧ ವೀರೇಶ್ವರನ ಸ್ತೋತ್ರಗಳಿರುತ್ತವೆ. ಪ್ರಥಮಾಧ್ಯಾಯದ ಆದಿಯಲ್ಲಿ ಮಾತ್ರ ಅಲ್ಲಮನ ಸ್ತುತಿಯಿರುತ್ತದೆ. ವ್ಯಾಸಮಹರ್ಷಿಗೆ ಸಿದ್ಧವೀರನೆಂಬ ಗುರುವಿದ್ದನೆಂದು ಎಲ್ಲಿಯೂ ನೋಡಿಲ್ಲ; ಹಾಗೂ ಕೇಳಿಲ್ಲ. ಬೇಕಾದವರು ಅವನಿಂದ ರಚಿಸಲ್ಪಟ್ಟ ಪುರಾಣಗಳನ್ನು ನೋಡಿ ತಿಳಿದುಕೊಳ್ಳಬಹುದು. ವ್ಯಾಸನ ಕವಿತಾರೀತಿಯೂ ಪದಯೋಜನೆಯೂ ಅತಿ ಮಹತ್ವವುಳ್ಳವುಗಳಿದ್ದು ಸುಗಮುಗಳಾಗಿರುತ್ತವೆ. ಇದರಲ್ಲಿ ಇವೆರಡೂ ಗುಣಗಳಿಲ್ಲ. ಇವೇ ಮೊದಲಾದ ಸಾವಿರಾರು ದೋಷಗಳು ಈ ಗ್ರಂಥದಲ್ಲಿ ಸಿಗುತ್ತವೆ. ಈ ಸರ್ವವಿಷಯಗಳಿಂದ ನೋಡುತ್ತಿರಲಾಗಿ ಪ್ರಭುಲಿಂಗ ಲೀಲೆಯನ್ನು ವ್ಯಾಸನು ರಚಿಸಿಲ್ಲವೆಂದು ಚಿಕ್ಕಬಾಲಕರಿಗೂ ಕೂಡ ತಿಳಿದುಬರುತ್ತದೆ. ಆದರೆ ಇದನ್ನು ಕರ್ನಾಟಕದೇಶದ ಒಬ್ಬಾನೊಬ್ಬ ಕವಿಯು ರಚಿಸಿರಬಹುದೆಂದು ತೋರಿಬರುತ್ತದೆ. ಯಾಕಂದರೆ—ಈ ಗ್ರಂಥದಲ್ಲಿ ಕರ್ನಾಟಕ ದೇಶದಲ್ಲಿ ಉಪಯೋಗಿಸುವ ಶಬ್ದಗಳೂ ಈ ದೇಶದಲ್ಲಿ ನಡೆಯುವ ನಡವಳಿಕೆಗಳೂ ಮೂರ್ತಿಮತ್ತಗಳಾಗಿರೋಣದರಿಂದ ಊಹಿಸಲವಕಾಶವಾಗಿರುತ್ತದೆ. ಅವೆಲ್ಲವುಗಳನ್ನು ಈಗ ಹೆಚ್ಚಿಗೆ ಪ್ರಸ್ತಾಪಿಸಿ ಬರೆಯುವಕಾರಣವಿಲ್ಲ. ಪ್ರಸಂಗವು ಬಂದರೆ ಆಧಾರಗಳ ಮೂಲಕ ವಿಶದವಾಗಿ ಬರೆಯೋಣ! ಆದಕಾರಣದಿಂದಲೇ ಈ ಗ್ರಂಥಕ್ಕೆ "ಯಾರೋ ಒಬ್ಬರಿಂದ ರಚಿಸಲ್ಪಟ್ಟ" ಎಂಬ ವಿಶೇಷಣವು ಕೊಡಲ್ಪಟ್ಟು ಬರೆಯಲ್ಪಟ್ಟಿರುತ್ತದೆಂದು ಸರ್ವರೂ ತಿಳಿಯತಕ್ಕದ್ದು.

"ಶಾಸ್ತ್ರರೀತಿಯಾಗಿ ಗುರುವೆಂಬವನು ಮಠಸ್ಥಲಸಮುತ್ಪನ್ನನಾಗಿಯೂ ಶಾಂತನಾಗಿಯೂ ಶೈವಾಗಮಾಭಿಜ್ಞನಾಗಿಯೂ ಏಕಪತ್ನೀವ್ರತನಿಷ್ಠೆಯೇ ಮೊದಲಾದ

ಧರ್ಮವುಳ್ಳವನಾಗಿಯೂ ಇದ್ದು ಪರಿಪಕ್ವಾಂತಃಕರಣನಾಗಿ ಪಂಚಮುದ್ರೆಗಳಂ ಧರಿಸಿದ ಮೇಲೆ ಜಂಗಮನೆಂದು ಹೇಳಿಸಿಕೊಳ್ಳುತ್ತಾನೆ. ಆ ರೀತಿಯಾಗಿ ವೈರಾಗ್ಯವನ್ನು ಹೊಂದುವದಕ್ಕೆ ಶಕ್ತಿಯಿಲ್ಲದಿದ್ದಲ್ಲಿ ತಮ್ಮ ಅಧಿಕಾರವನ್ನು ತಮ್ಮ ವಂಶೋತ್ಪನ್ನರಾದ ಶಿಷ್ಯರಿಗೆ ಕೊಟ್ಟು ಗೃಹಸ್ಥಾಶ್ರಮವನ್ನು ಸ್ವೀಕರಿಸಬಹುದು. ಆರೂಢ ವಾಚ್ಯರಾದ ಜಂಗಮರಾದವರು ತಮ್ಮ ಧರ್ಮದಿಂದಚ್ಯುತರಾದಲ್ಲಿ (ಉತ್ತಮಾಂಗಶಿವಾಶ್ರಿತ್ಯ ನೀಚಾಂ ವೃತ್ತಿಂ ಸಮಾಶ್ರಿತಃ | ಆರೂಢಪತಿತೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ|| '' ಎಂಬಂತೆ ಭ್ರಷ್ಟತ್ವವೇ ಸ್ಥಿರವಾಗುವದು. ಆದಕಾರಣ ಗುರುಗಳಿಗಿಂತಲೂ ಜಂಗಮರೆಂದು ಹೇಳಿಸಿಕೊಳ್ಳುವ ವಿರಕ್ತರಲ್ಲಿರುವ ಸರ್ವೋತ್ಕೃಷ್ಟತ್ವವನ್ನು ಮರೆಮಾಚುವದಕ್ಕೆ ಕಾವ್ಯತೀರ್ಥರು ಎಷ್ಟು ತಪಸ್ಸುಮಾಡಿದರೂ ಸಾಧ್ಯವಾಗಲಾರದು'' ಎಂದು ಶಾಸ್ತ್ರಿಗಳು ಬರೆದಿದ್ದಾರೆ.

ಶಾಸ್ತ್ರಿಗಳೇ! ನೀವು ತೋರಿಸಿರುವ ಈ ಎಲ್ಲ ವಾಕ್ಯಗಳಲ್ಲಿ ಪೂರ್ವಾಪರವಾಗಿ ಎಷ್ಟು ದೋಷಗಳಿರುತ್ತವೆನ್ನುವದನ್ನು ಎಷ್ಟೊ ಆಲೋಚಿಸಿದಂತೆ ಕಾಣುವುದಿಲ್ಲ. ಯಾಕಂದರೆ—ಗುರುವೆಂಬವನು ಏಕಪತ್ನೀವ್ರತನಿಷ್ಠೆಯೇ ಮೊದಲಾದ ಧರ್ಮಗಳುಳ್ಳವನಾಗಿ ಪಂಚ ಮುದ್ರೆಗಳಂ ಧರಿಸಿದ ಮೇಲೆ ಜಂಗಮನೆಂದು ಹೇಳಿಸಿಕೊಳ್ಳುತ್ತಾನೆಂದು ಬರೆದಿರುವಿರಿ. ನಿಮ್ಮ ಅಭಿಪ್ರಾಯದಂತೆ ಜಂಗಮರೆಂಬ ವಿರಕ್ತರು ಏಕಪತ್ನೀವ್ರತನಿಷ್ಠೆಯುಳ್ಳವರಾಗಿ ಅನಂತರ ವಿರಕ್ತಾಶ್ರಮವನ್ನು ಗ್ರಹಿಸುವರೇನು? ಪಂಚ ಮುದ್ರೆಗಳು ದೀಕ್ಷಾಕಾಲದಲ್ಲಿ ಸಿಗದೆ ಲಗ್ನವಾದನಂತರ ಸನ್ಯಾಸಾಶ್ರಮವನ್ನು ಸ್ವೀಕರಿಸುವ ಕಾಲಕ್ಕೆ ಸಿಗುವವೇನು? ಗುರುವು ಏಕಪತ್ನೀವ್ರತಸ್ಥನಾಗಿರಬೇಕೆಂದು ಮೊದಲು ಹೇಳುತ್ತೀರಿ. ಅನಂತರ ವೈರಾಗ್ಯವನ್ನು ಹೊಂದಲಿಕ್ಕೆ ಶಕ್ತಿಯಿಲ್ಲದಿದ್ದಲ್ಲಿ ತಮ್ಮ ಅಧಿಕಾರವನ್ನು ತಮ್ಮ ವಂಶೋತ್ಪನ್ನರಾದ ಶಿಷ್ಯರಿಗೆ ಕೊಟ್ಟು ಗೃಹಸ್ಥಾಶ್ರಮವನ್ನು ಸ್ವೀಕರಿಸಬಹುದೆಂದು ಬರೆದಿರುತ್ತೀರಿ. ಮೊದಲೇ ಗೃಹಸ್ಥರಾದಮೇಲೆ ಪುನಃ ಗೃಹಸ್ಥಾಶ್ರಮವನ್ನು ಸ್ವೀಕರಿಸುವದು ಎಲ್ಲಿಯದು? ಈ ತರಹದ ಅಭಿಪ್ರಾಯವನ್ನು ಬರೆಯಬೇಕಾದರೆ ನಿಮಗೆ ಯಾವಗ್ರಂಥವು ಪ್ರಮಾ

ಣವಾಗಿರುವದು ? ಹೀಗೆ ಪೂರ್ವಾಪರವಿರುದ್ಧವಾಗಿ ತಿಳಿವಳಿಕೆಯಿಲ್ಲದೆ ಬರೆದರೆ ಜನರಾದರೂ ಏನೆನ್ನುವರೆನ್ನುವದನ್ನು ಪೂರ್ಣವಾಗಿ ಲಕ್ಷ್ಯೆ ದಲ್ಲಿ ತಂದುಕೊಳ್ಳಿರಿ ; ಹಾಗೂ ಆರೂಢವಾಚ್ಯರಾದ ಜಂಗಮರಾದವರು ಧರ್ಮದಿಂದಚ್ಯುತರಾದಲ್ಲಿ " ಉತ್ತಮಾಂಗತಿಮಾಶ್ರಿತ್ಯ " ಈ ಶ್ಲೋಕ ದಂತೆ ಭ್ರಷ್ಟತ್ವವೇ ಸಿದ್ಧವಾಗುವದೆಂದು ಬರೆದಿರುವಿರಿ. ಮಹಾಶಯರೇ! ಇದು ಎಲ್ಲಿಯ ಪದ್ಯವಿರುತ್ತದೆನ್ನುವದು ಗೊತ್ತುಂಟೋ ? ಗೊತ್ತಿದ್ದರೆ ಹೀಗೆ ಏಕೆ ಬರೆದೀರಿ ? ಸಿದ್ಧಾಂತಶಿಖಾಮಣಿಯ ಭಕ್ತಮಾರ್ಗ ಕ್ರಿಯಾಸ್ಥಲದಲ್ಲಿ—

ಯತ್ರ ಚಾಚಾರನಿಂದಾಽಸ್ತಿ ಕದಾಚಿತ್ತತ್ರ ನ ವ್ರಜೇತ್ ।
ಯದ್ಗೃಹೇ ಶಿವನಿಂದಾಽಸ್ತಿ ತದ್ಗೃಹಾಣಿ ಪರಿತ್ಯಜೇತ್ ॥೩೭॥
ಯಃ ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿಂದತಿ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥೩೮॥
ಶಿವಪೂಜಾಪರೋ ಭೂತ್ವಾ ಪೂರ್ವಕರ್ಮ ವಿಸರ್ಜಯೇತ್ ।
ಅಥವಾ ಪೂರ್ವಕರ್ಮ ಸ್ಯಾತ್ತಾ ಪೂಜಾ ನಿಷ್ಫಲಾ ಭವೇತ್ ॥
ಉತ್ತಮಾಂ ಗತಿಮಾಶ್ರಿತ್ಯ ನೀಚಾಂವೃತ್ತಿಂ ಸಮಾಶ್ರಿತಃ ।
ಆರೂಢಪತಿತೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥೪೦॥

ಈ ಶ್ಲೋಕಗಳ ಅಭಿಪ್ರಾಯದಂತೆ ಶಿವಪೂಜಾತತ್ಪರನಾದ ಭಕ್ತನು ಶಿವೇತರದೇವತಾಪೂಜಾಧ್ಯಾನಾದಿಗಳನ್ನು ಬಿಡಬೇಕೆಂದೂ, ಹಾಗಿಲ್ಲದ ಪಕ್ಷದಲ್ಲಿ ಆರೂಢಪತಿತನಾಗುವನೆಂದೂ ಸಾಕ್ಷಾದ್ರೇಣುಕಾ ಚಾರ್ಯರೇ ಅಗಸ್ತ್ಯಮಹರ್ಷಿಯ ಮುಂದೆ ಭಕ್ತಸ್ಥಲದ ವಿಷಯದಲ್ಲಿ ಅಪ್ಪಣೆಯನ್ನು ಕೊಡಿಸಿದ್ದಾರೆ. ಹೀಗಿದ್ದು ಈ ಪದ್ಯವನ್ನು ವಿರಕ್ತರ ಪರವಾಗಿ ಸಂಬಂಧಮಾಡಿಕೊಂಡಿರುವುದು ತಿಳಿವಳಿಕೆಯಿಲ್ಲದ್ದಾಗಿರು ತ್ತದೆ. ಸಂಬಂಧವಿಲ್ಲದ (ಪ್ರಕರಣವಿರುದ್ಧವಿರಲಿ ಅಥವಾ ಇಲ್ಲದಿರಲಿ)

ಸಂಸ್ಕೃತ ಪದ್ಯಗಳನ್ನು ಬರೆದರೆ ಮೂಢಜನರು ಪ್ರಮಾಣಗಳೆಂದು ತಿಳಿಯುತ್ತಾರೆಂದು ಹೀಗೆ ಬರೆದಿರುವಿರೇನು? ನೀವು ಇಷ್ಟು ಅಜ್ಞಾನದ ಮಟ್ಟೆಯನ್ನು ಹೊತ್ತುಕೊಂಡು "ಹುಚ್ಚುಬಿಟ್ಟಿತು ಸುತ್ತಲಿಕ್ಕೆ ವನಿಕೆಯ ತಾ" ಎಂದೆನ್ನುವ ಪ್ರವೀಣನಂತೆ "ವಿರಕ್ತರಲ್ಲಿರುವ ಸರ್ವೋತ್ಕೃಷ್ಟತ್ವವನ್ನು ಮರೆಮಾಚುವದಕ್ಕೆ ಕಾವ್ಯತೀರ್ಥರು ಎಷ್ಟು ತಪಸ್ಸುಮಾಡಿದರೂ ಸಾಧ್ಯವಾಗಲಾರದು" ಎಂದು ಬರೆದಿರುವಿರಿ. ಶಾಸ್ತ್ರಿಗಳೇ! ಈ ಪ್ರಕಾರವಾಗಿ ಬರೆಯುಬೇಕಾದರೆ ನೀವು ಅತ್ಯಂತ ನಿರ್ದೋಷಿಗಳಾಗಿ ಬರೆಯುಬೇಕಾಗಿತ್ತು. ಈಗ ಮುಖಭಂಗಿತರಾಗಲಿಲ್ಲವೇ? ಇದರಿಂದ ವಿರಕ್ತರಲ್ಲಿ ಸರ್ವೋತ್ಕೃಷ್ಟತ್ವವನ್ನು ಸ್ಥಿರಮಾಡಿಕೊಟ್ಟಂತಾಯಿತೇ? ತಪಸ್ಸುಮಾಡಬೇಕೆಂದು ಬರೆದಿರುತ್ತೀರಿ. ಹೀಗೆ ಬರೆಯುವ ಕಾಲಕ್ಕೆ ನಿಮ್ಮ ಬುದ್ಧಿಯು ಸ್ವತಂತ್ರದಲ್ಲಿದ್ದಿಲ್ಲವೇನು? ನೀವು ಪ್ರತಿಯೊಂದು ವಿಷಯದಲ್ಲಿಯೂ ಶಾಸ್ತ್ರಮಾರ್ಗವನ್ನು ಬಿಟ್ಟು ಅಡ್ಡಹಾದಿಯನ್ನು ಹಿಡಿಯುತ್ತೀರಿ; ಹೀಗೆ ನಡೆಯಬಾರದೆನ್ನುವುದೇ ನಿಮಗೆ ಪುನಃ ಪುನಃ ಸೂಚನೆಯು. ಇರಲಿ; ಶಾಸ್ತ್ರಿಗಳೇ! ಮೊದಲು ಗುರುವು ತನ್ನ ಅಧಿಕಾರವನ್ನು ಕೊಡಬೇಕಾದರೆ—

ದಮಿತೇಂದ್ರಿಯವರ್ಗಾಯ ಸತ್ಯಾಚಾರಪರಾಯಚ।<br>
ನಿರಹಂಕಾರಿಣೇ ಸತ್ಯವಚಸೇ ಶುದ್ಧಚೇತಸೇ॥<br>
ಪರದ್ರವ್ಯಾಬಲಾಮುಖ್ಯಗ್ರಹಣೇಽನಾತ್ತಚೇತಸೇ॥

ಇತ್ಯಾದಿ ಪ್ರಮಾಣಗ್ರಂಥಗಳ ಆಧಾರಗಳಿಂದ ಇಂದ್ರಿಯಗಳನ್ನು ದಮನಮಾಡಿದಂಥ ಸದಾಚಾರವುಳ್ಳಂಥ ನಿರಹಂಕಾರಿಯಾದ ಹಾಗೂ ಪರದ್ರವ್ಯ ಪರಸ್ತ್ರೀ ಮೊದಲಾದವುಗಳಲ್ಲಿ ಮನಸ್ಸನ್ನು ಕೊಡದೆ ಇದ್ದ ಸತ್ಕುಲೋತ್ಪನ್ನನಿಗೆ ಗುರುಗಳು ಪರೀಕ್ಷೆಯನ್ನು ಮಾಡಿ ಅಧಿಕಾರವನ್ನು ಕೊಡಬೇಕೆಂದು ಸಿದ್ಧವಾಗುತ್ತದೆ. ಇಂದ್ರಿಯಗಳನ್ನು ದಮನಮಾಡಿದವನಿಗೆ ಅಧಿಕಾರವನ್ನು ಕೊಡತಕ್ಕದ್ದೆಂದ ಮೇಲೆ ಅವನು ಗೃಹಸ್ಥಾ

ಶ್ರಮಿಯು ಹೇಗೆ ಆಗುವನು ? ಆಗಲಿಕ್ಕೆ ಬರುವುದಿಲ್ಲವೆಂದು ತಿಳಿಯ ತಕ್ಕದ್ದು. ಇರಲಿ ;

" ಪಂಚಮುದ್ರಾಧಾರಿಗಳಾದ ಈಗಿನ ವಿರಕ್ತರೆಲ್ಲರೂ ಪಂಚಾಚಾರ್ಯರಲ್ಲಿ ಶರಣಾಗತರಾಗಿ ಪಂಚಾಚಾರ್ಯರಿಂದುಪದೇಶವನ್ನು ಹೊಂದಿ ಮುಕ್ತರಾಗಲೆಂದು ಹೇಳಿರುವ ಕಾವ್ಯತೀರ್ಥರ ಮಾತು ಆಕಾಶದಲ್ಲಿರುವ ಕಮಲದ ಗಂಧದಂತೆ ಕೇವಲ ಮಿಥ್ಯಾಭೂತವಾದದ್ದೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ."

ಎಂಬ ವಾಕ್ಯಗಳನ್ನು ನಮ್ಮ ಶಾಸ್ತ್ರಿಗಳು ಒಳ್ಳೇ ಆನಂದದ ಭರದಲ್ಲಿಯೇ ಬರೆದಿರುತ್ತಾರೆಂದು ಕಂಡುಬರುತ್ತದೆ. ಇವರಿಗೆ ಇಷ್ಟು ಆನಂದವು ಬರಬೇಕಾದರೆ ವಿರಕ್ತರಿಗೆ ಪಂಚಮುದ್ರೆಗಳುಂಟು; ಇನ್ನುಳಿದವರಿಗೆ ಇರುವುದಿಲ್ಲವೆಂದು ತಿಳಿದುಕೊಂಡಿರುವುದೇ ಮೂಲಕಾರಣವಿರಬಹುದೆಂದು ಇವರ ಬರಹದಿಂದಲೇ ವ್ಯಕ್ತವಾಗುತ್ತದೆ. ಶಾಸ್ತ್ರಿಗಳೇ ! ಪಂಚಮುದ್ರೆಗಳು (ದಂಡ, ಕಮಂಡಲು, ಭಿಕ್ಷಾಪಾತ್ರ, ಭಸ್ಮಘುಟಿಕಾ, ಕಂಥಾ) ವೀರಮಾಹೇಶ್ವರ ದೀಕ್ಷಾಕಾಲದಲ್ಲಿಯೇ ಪ್ರತಿಯೊಬ್ಬ ಆಚಾರ್ಯಕುಲೋತ್ಪನ್ನನಿಗೆ ಶಿಗುತ್ತವೆ. ಇದನ್ನು ನೀವು ನೋಡಿಲ್ಲವೇನು? ಇದರ ಮೇಲಿಂದ ನೀವಂತೂ ಆಚಾರ್ಯಕುಲೋತ್ಪನ್ನರಲ್ಲವೆಂದು ಕಂಡುಬರುತ್ತದೆ.

ದೀಕ್ಷೋಪದೇಶನಂ ಚೈವ ಲಿಂಗಧಾರಣಪೂರ್ವಕಂ ।
ತತ್ರಸ್ಮುದ್ರಾನುಸಾರೇಣ ಕುರ್ವಂತ್ಯೇತೇ ಮಹೀತಲೇ ॥

ಇತಿ ಸುಪ್ರಬೋಧಾಗಮೇ.

ವೀರಮಾಹೇಶ್ವರೀಂ ದೀಕ್ಷಾಂ ಋತ್ವಿಗ್ಭಿಃ ಸಹ ಕಾರಯೇತ್ ।
ಭಿಕ್ಷಾಪಾತ್ರಂ ದಂಡಕಾಷ್ಠಂ ಕಂಥಾಂ ಕಾಷಾಯವಸ್ತ್ರಕಾಂ ॥
ದದ್ಯಾತ್ಕಮಂಡಲುಂ ಚೈವ ವಿಭೂತೇರ್ಘುಂಟಿಕಾಮಪಿ ।
ತತೋ ಭಿಕ್ಷಾಂ ಚರೇದ್ಭಕ್ತ್ಯಾ ಸ್ವಶಾಖೋಕ್ತವಿಧಾನತಃ ॥
ದತ್ವಾ ಲಿಂಗಾಂಗಸಂಬಂಧಬೋಧಶಾಸ್ತ್ರಂ ಸಮಾದಿಶೇತ್ ।

ಸ್ವಾಸನೇ ಸನ್ನಿವೇಶ್ಯಾಥ ನಮಸ್ಕುರ್ಯಾತ್ ಸ್ವಯಂಗುರುಃ ||
ಏವಂ ಗುರುಪದೋದ್ಭೂತಾ ಜಂಗಮಾಃ ಪರಿಕೀರ್ತಿತಾಃ ||

ಇತಿ ವೀರಶೈವಸದಾಚಾರಸಂಗ್ರಹೇ.

ಇತ್ಯಾದಿ ಪ್ರಮಾಣಗಳಿಂದ ಗುರುಗಳು ದೀಕ್ಷೆಯ ಕಾಲದಲ್ಲಿಯೇ ಪಂಚಮುದ್ರೆಗಳನ್ನು ಕೊಡುತ್ತಾರೆಂದೂ, ಅಂಥ ಗುರುಪಾದದಲ್ಲಿ ಉದ್ಭವರಾದವರೇ ಜಂಗಮರಾಗುತ್ತಾರೆಂದೂ ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಆಚಾರ್ಯ ವಟುಗಳು ಪಂಚಮುದ್ರೆಗಳಿಂದ ಕೂಡಿದ ಮೇಲೆ ಇವರಿಗಿಂತ ಪಟ್ಟಾಧಿಕಾರಿಗಳ ಹಾಗೂ ಚರಮೂರ್ತಿಗಳ (ಜಂಗಮಮೂರ್ತಿಗಳ) ಅಧಿಕಾರವು ಏಕೆ ಹೆಚ್ಚು? ಎಂಬ ಪ್ರಶ್ನವು ಹೊರಡುತ್ತದೆ. ಆದರೆ ವಟುಗಳಿಗೆ ಶಂಖ ಹಾಗೂ ಪಾತ್ರ ಮೊದಲಾದ ಗುರುವಿನ ಮುಖ್ಯಚಿಹ್ನಗಳು ದೊರಕಿರುವುದಿಲ್ಲ. ಇವರಿಗೆ (ಪಟ್ಟಚರಾಧಿಕಾರಿಗಳಿಗೆ) ದೊರಕಿರುತ್ತವೆ. ಪಂಚಮುದ್ರೆಗಳೂ ಅವುಗಳಿಗಿಂತ ಹೆಚ್ಚಿನ ಗುರುಚಿಹ್ನಗಳೂ ಇವರಲ್ಲಿರುತ್ತವಾದ್ದರಿಂದಲೇ ಇವರು ಗುರುಚಿಹ್ನಶೂನ್ಯರಾದ ವಿರಕ್ತ ಮೊದಲಾದವರಿಗಿಂತ ಪೂಜ್ಯರಾಗುತ್ತಾರೆಂದು ಶಾಸ್ತ್ರಸಿದ್ಧಾಂತವು.

"ಮತ್ತು ಶಾಸ್ತ್ರಸಿದ್ಧವಾದ ಶಿಷ್ಯತ್ವವನ್ನು ವಿರಕ್ತರು ಬಿಟ್ಟು ಕ್ರಿಸ್ತಶಕದಿಂದೀಚೆಗೆ *ಪ್ರವರ್ತಿಸುವದಕ್ಕೆ ಬೇರೆ ಕಾರಣವಿದೆಯೆಂದು ವೀರಶೈವ ಸಮಾಜದಲ್ಲಿ ನೂತನ ಪಿಶಾಚವೊಂದನ್ನು ನುಗ್ಗಿಸುವದಕ್ಕೆ ಇವರು ಪ್ರಯತ್ನಿಸಿರುವರು. ಆದರೆ ಈ ಪಿಶಾಚೋಚ್ಚಾಟನಕ್ಕೆ ಸಮರ್ಥವಾದ ಸಿದ್ಧಾಂತರೂಪವಾದ ಮಹಾಮಂತ್ರಪ್ರಯೋಗವು ಜಾಗರೂಕವಾಗಿಯೇ ಇರುವದು

(ಅಥ ತಚ್ಚರಲಿಂಗಸ್ಯ ಮಾಹಾತ್ಮ್ಯಂ ಶೃಣು ಪಾರ್ವತಿ | ಆದೌ ತಚ್ಚರಲಿಂಗಂತು ನಿರಂಜನಮಿತಿಶ್ರುತಂ | ತ್ರೇತಾಯಾಂತು ತದೇವ ಸ್ಯಾತ್ ನಿರ್ಮಾಯಮಿತಿ

---

* ಟಿಪ್ಪಣಿ—ಶಾಸ್ತ್ರಿಗಳು "ಕ್ರಿಸ್ತಶಕದಿಂದೀಚೆಗೆ" ಎಂದು ಬರೆದಿರುತ್ತಾರೆ. ಇದು ತಪ್ಪು; ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳು ಕ್ರಿ. ಶ. ೧೨ ನೆಯ ಶತಮಾನದಿಂದೀಚೆಗೆಂದು ತಮ್ಮ ಗ್ರಂಥದಲ್ಲಿ ಬರೆದಿರುತ್ತಾರೆ.

ಕೀರ್ತಿತಂ | ದ್ವಾಪರೇ ನಿಷ್ಕಲಂ ಚೇತಿ ವಿಶ್ರುತಂಚ ತದೇವಹಿ | ಕಲೌ ಪ್ರಭುರಿತಿ ಖ್ಯಾತಂ ತಚ್ಚ ನಾಮಾನಿ ವೈ ಕ್ರಮಾತ್ | ಕಲೌ ತತ್ಪ್ರಭುದೇವಸ್ಯ ಪೀಠಂ ಕಲ್ಯಾಣ ಪತ್ತನೇ | ಶೂನ್ಯ ಸಿಂಹಾಸನಂಚೇತಿ ತದೇವ ಪ್ರಥಿತಂ ಭುವಿ | ಪ್ರಭೋರನ್ವಯ ಜಾತಾನಾಂ ಚರಾಣಾಂ ಲಕ್ಷಣಂ ಶ್ರುಣು | ಕಲಶೋ ವಜ್ರರೂಪಸ್ತು ಗೋಃಪ್ಯಾನನ ಸಮುದ್ಭವಃ | ಮೂಲಪ್ರಣವಸಂಯುಕ್ತೋ ಗಂಗಾತೋಯಪ್ರಪೂರಿತಃ | ಜಟಿನೋ ಮುಂಡಿನೋವಾಪಿ ಶಿಖಿನೋವಾಪಿಸಂತತಂ | ಭಿಕ್ಷಾಶಿನೋ ಭಯಾತೀತಾಃ ಕಾಷಾಯವಸನಾವೃತಾಃ | ದಂಡಕೌಪೀನಕಂಥಾದಿಪಂಚಮುದ್ರಾ ವಿರಾಜಿತಾಃ || ನಿಷ್ಕಾಮಾ ನಿರಹಂಕಾರಾ ನಿರುತ್ಸೇಕಾ ನಿರಾಮಯಾಃ | ನಿಃಸ್ಪೃಹಾ ನಿಜಲಿಂಗೈಕ್ಯಾ ನಿರಪೇಕ್ಷಾ ನಿರಾಕುಲಾಃ || ಸರ್ವಭೂತದಯಾಯುಕ್ತಾ ನಿರಾಭಾರಾ ಇತಿಸ್ಮೃತಾಃ|| ಮೊದಲಾದ ಸ್ವಾಯಂಭುವಾಗಮದ ಪ್ರಮಾಣಗಳಿದ್ದಾಗ್ಯೂ ಇವೆಲ್ಲವನ್ನೂ ಕಾವ್ಯತೀರ್ಥರು ನೋಡದೆ ಉನ್ಮತ್ತಗಜದಂತೆ ಕರ್ತವ್ಯಾಕರ್ತವ್ಯವಿಚಾರಶೂನ್ಯರಾಗಿ ಪ್ರವೇಶಮಾಡಿರುವದರಿಂದ ಅದರ ಫಲವು ಅಗಾಧಗರ್ತಪತನರೂಪವಾಗಿಯೇ ಇರುವುದು" ಎಂದು ನಮ್ಮ ಶಾಸ್ತ್ರಿಮಹಾಶಯರು ಬರೆದಿರುತ್ತಾರೆ.

ಶಾಸ್ತ್ರಿಗಳೇ! ನಿಮ್ಮ ಮಹಾಮಂತ್ರವು ಇನ್ನು ಸ್ವಲ್ಪ ಹೊತ್ತಿನಲ್ಲಿ ಕುಣಿದಾಡಲಿಕ್ಕೆ ಹತ್ತುತ್ತದೆ. ಅದರ ಚಮತ್ಕೃತಿಯನ್ನು ನೋಡಿರಿ. ನಾಲ್ಕೂ ಯುಗಗಳಲ್ಲಿ ವಿರಕ್ತರ ಅವತಾರವಾಯಿತೆಂದೂ ಅವರೇ ಕ್ರಮವಾಗಿ ನಿರಂಜನ, ನಿರ್ಮಾಯ, ನಿಷ್ಕಲ ಹಾಗೂ ಪ್ರಭು ಎಂಬ ಹೆಸರುಗಳಿಂದ ಪ್ರಸಿದ್ಧರಾದರೆಂದೂ, ಕಲಿಯುಗದಲ್ಲಿ ಪ್ರಭುದೇವನ ಪೀಠವು ಕಲ್ಯಾಣಪಟ್ಟಣದಲ್ಲಿ ಶೂನ್ಯಸಿಂಹಾಸನವೆಂಬ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧವಾಯಿತೆಂದೂ, ಆ ಪ್ರಭುವಿನ ಕುಲದಲ್ಲಿ ಹುಟ್ಟಿದವರೇ ಜಂಗಮರಾದರೆಂದೂ, ಅವರ ಕಲಶವೇ ವಜ್ರಕಲಶವೆಂದೂ ಇವೇ ಮೊದಲಾದವುಗಳನ್ನು ಸ್ವಯಂಭುವಾಗಮದಲ್ಲಿ ಪರಮೇಶ್ವರನು ಪಾರ್ವತಿಯ ಮುಂದೆ ಹೇಳಿದ್ದಾನೆಂದು ನೀವು ಕೊಟ್ಟಿರುವ ಈ ಆಧಾರಗಳಿಂದ ತಿಳಿದುಬರುತ್ತದೆ. ಇದರಮೇಲೆ ಸ್ವಲ್ಪ ವಿಚಾರಿಸೋಣ !

ಪ್ರಭುದೇವನ ಪೀಠವು ಕೇವಲ ಕಲಿಯುಗದಲ್ಲಿಯೇ ಕಲ್ಯಾಣ ಪಟ್ಟಣದಲ್ಲಿ ಆಯಿತೆಂದು ಇದರ ಮೇಲಿಂದ ತಿಳಿದುಬರುತ್ತದೆ. ಆದರೆ ಕೃತಯುಗ ತ್ರೇತಾಯುಗ ದ್ವಾಪರಯುಗಗಳಲ್ಲಿ ಯಾವ ಊರಲ್ಲಿ ಇತ್ತು? ಕಲ್ಯಾಣದಲ್ಲಿಯೇ ಇತ್ತೆಂದು ಅಂದರೆ ಆತರಹದ ಅಭಿಪ್ರಾಯವು ನೀವು ಕೊಟ್ಟಿರುವ ಶ್ಲೋಕಗಳಲ್ಲಿ ಪಾತಾಳಗಡೆಯನ್ನು ಹಾಕಿ ಹುಡುಕಿದರೂ ಹೊರಡುವುದಿಲ್ಲ. ಜಗದ್ಗುರು ಪಂಚಾಚಾರ್ಯರ ಉತ್ಪತ್ತಿಯನ್ನು ಸ್ವಯಂಭು ಮೊದಲಾದ ಆಗಮಗಳಲ್ಲಿ ನೋಡಿರಿ? ಸ್ಪಷ್ಟವಾಗಿ ನಾಲ್ಕೂ ಯುಗಗಳಲ್ಲಿ ಇಂಥ ಇಂಥ ಲಿಂಗಗಳಿಂದ ಅವತರಿಸಿ, ಇಂಥ ಇಂಥ ಸ್ಥಾನಗಳಲ್ಲಿಯೇ ಸಿಂಹಾಸನಗಳನ್ನು ಸ್ಥಾಪನ ಮಾಡಿರುವರೆಂದು ಸಾಕ್ಷಾತ್ಪರಶಿವನು ಭವಿಷ್ಯತ್ಕಾಲದ ಪ್ರಯೋಗಗಳನ್ನು ಮಾಡಿ ಪಾರ್ವತಿಯ ಮುಂದೆ ಅಪ್ಪಣೆಯನ್ನು ಕೊಡಿಸಿದ್ದಾನೆ.

ಪ್ರವಕ್ಷ್ಯಾಮಿ ಭವಿತ್ರೂಂಶ್ಚ ಶೃಣು ತಜ್ಜನನಕ್ರಮಂ ॥
ದ್ರಾಕ್ಷಾರಾಮೇ ರಾಮನಾಥಲಿಂಗೇ ಯುಗಚತುಷ್ಟಯೇ ।
ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ॥
ಸುಧಾಕುಂಡಾಖ್ಯಸುಕ್ಷೇತ್ರೇ ಲಿಂಗೇ ಶ್ರೀಮಲ್ಲಿಕಾರ್ಜುನೇ ।
ಜನನಂ ಪಂಡಿತಾರ್ಯಸ್ಯ ನಿವಾಸಶ್ಶ್ರೀಗಿರೌ ಶಿವೇ ॥
ತಥಾ ರೇವಣಸಿದ್ಧಸ್ಯ ಕೊಲ್ಲಿಪಾಕಿಪುರೋತ್ತಮೇ ।
ಸೋಮೇಶಲಿಂಗೇ ಜನನಮಾವಾಸಃ ಕದಲೀಪುರೇ ॥
ತದ್ವನ್ಮರುಲಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶಲಿಂಗೇ ಜನನಂ ಸ್ಥಾನಮುಜ್ಜಯಿನೀಪುರೇ ॥
ಕಾಶ್ಯಾಂ ವಿಶ್ವೇಶ್ವರೇ ಲಿಂಗೇ ವಿಶ್ವಾರಾಧ್ಯಸ್ಯ ಸಂಭವಃ ।
ಸ್ಥಾನಂ ಶ್ರೀಕಾಶಿಕಾಕ್ಷೇತ್ರೇ ಶೃಣು ಪಾರ್ವತಿ ಸಾದರಂ ॥
ಕೃತಾದ್ಯುಗಚತುಷ್ಕೇ ತೇ ಪಂಚಾರಾಧ್ಯಾ ಯಥಾವಿಧಿ ।

ಮನುಪಂಚಮುಖೋದ್ಭೂತಾಃ ಸಂಸ್ಥಾಪ್ಯ ಕಲಶಾನ್ ಭುವಿ ।
ದೀಕ್ಷಾಂ ಕೃತ್ವಾ ಕ್ರಮಾದೇವ ಪಂಚಮಾನಾಂ ನಗಾತ್ಮಜೇ ॥

ಇತ್ಯಾದಿಪ್ರಮಾಣಗಳಿಂದ ಯಥಾರ್ಥವಾಗಿ ಪರಶಿವನು ಹೇಳಿದ್ದಾನೆ. ಇದರಂತೆಯೇ ಅನುಸರಿಸಿ ವಿರಕ್ತರ ಪರವಾಗಿ ಮಾಡಬೇಕೆಂದು ನೆನೆದು, ಸ್ವಯಂಭುವಾಗಮದಲ್ಲಿ ಪರಶಿವನು ಪಾರ್ವತಿಯ ಮುಂದೆ ಹೇಳಿದ ಹಾಗೆ ಶ್ಲೋಕಗಳನ್ನು ಯಾರೋ ಒಬ್ಬರು ಬರೆದಂತೆ ಕಾಣುತ್ತದೆ. ಸತ್ಯವಾಗಿ ಪರಶಿವನೇ ಹಾಗೆ ಹೇಳಿದ್ದ ಪಕ್ಷದಲ್ಲಿ ನಾಲ್ಕೂ ಯುಗಗಳಲ್ಲಿ ಇಂಥ ಇಂಥ ಹೆಸರುಗಳಿಂದ ಅವತರಿಸುವುದೆಂದು ಭವಿಷ್ಯತ್ಪ್ರಯೋಗವನ್ನು ಮಾಡಿ ಪಂಚಾಚಾರ್ಯರ ಅವತಾರದಂತೆ ಇದನ್ನಾದರೂ ಹೇಳುತ್ತಿದ್ದನು; ಹಾಗೆ ಹೇಳಿಲ್ಲವಾದಕಾರಣ ಹಾಗೂ ಈ ರಚನೆಯಲ್ಲಿ ಬಹು ವ್ಯತ್ಯಸ್ತವಾಗಿ ಕಂಡುಬರುವಕಾರಣ "ಆದೌ ತಚ್ಚರಲಿಂಗಂತು" ಇತ್ಯಾದಿ ಪದ್ಯಗಳು ಶಿವೋಕ್ತಗಳಲ್ಲವೆಂದು ನಿರ್ಧರಿಸಲ್ಪಡುವದು. ಇವು ನಿಶ್ಚಯವೆಂದೇ ಅಂದದ್ದಾದರೆ ಇತಿಹಾಸದೃಷ್ಟಿಯಿಂದಲೂ ಗ್ರಂಥಾಂತರಗಳ ಆಧಾರಗಳಿಂಲೂ ಪೂರ್ವಾಪರವಾಗಿ ವಿಶೇಷದೋಷವು ಕಂಡುಬರುತ್ತದೆ. ಆದಕಾರಣ ಇವೆಲ್ಲ ಕಲ್ಪನಾಕೃತಗಳೆಂದು ಸ್ಥಿರವಾಗುವದಲ್ಲದೆ ಬೇರೊಂದು ಇರುವುದಿಲ್ಲ. ಆಗಮದಲ್ಲಿ ಸೇರಿಸಿದ್ದಾದರೆ ಸರ್ವರೂ ಮನ್ನಿಸುತ್ತಾರೆಂದು ತಿಳಿದು ಈ ತರಹದ ಯುಕ್ತಿಯನ್ನು ಮಾಡಿದ್ದಾರೆ. ಪಂಚಪೀಠಗಳ ಹೆಸರುಗಳನ್ನು ಬಿಟ್ಟು ಬೇರೊಂದರ ಹೆಸರು ಯಾವ ಆಗಮಗಳಲ್ಲಿಯೂ ಉಲ್ಲೇಖಿಸಿಲ್ಲ. ಇನ್ನು ಮೇಲೆ ಪರಮಾತ್ಮನು ಇವರಿಗಾಗಿ ಈ ಗ್ರಾಮಗಳ ಹೆಸರುಗಳನ್ನು ತೆಗೆದುಕೊಂಡು ಹೊಸದಾಗಿ ಮತ್ತೊಂದು ಆಗಮವನ್ನು ರಚಿಸಬೇಕಾಗಿರುತ್ತದೆ. ಇರಲಿ; ಇದರ ಯಥಾರ್ಥತತ್ವವು ಬೇರೆಯೇ ಇರುತ್ತದೆ. ಅದೇನೆಂದರೆ—ಕ್ರಿಸ್ತಶಕದ ೧೫ನೆಯ ಶತಮಾನದಿಂದಾಚೆಗೆ ಇಡೀ ಭರತಖಂಡದಲ್ಲಿ ಇಂಥ ಊರಲ್ಲಿ ಇಂಥದೊಂದು ವಿರಕ್ತಮಠವಿತ್ತೆಂದು

ಕಂಡುಬರುವುದಿಲ್ಲ. ಇದ್ದರೆ ಶಿಲಾಲೇಖದ ಆಧಾರವನ್ನು ತೋರಿಸಿರಿ? ನಾಲ್ಕೂ ಯುಗಗಳಲ್ಲಿತ್ತೆನ್ನುವದು ಎಷ್ಟು ಅಸಮಂಜಸವು ನೋಡಿರಿ? ಬಸವನ ಕಾಲಕ್ಕೆ ಕಲ್ಯಾಣದಲ್ಲಿ ಆವನೇ ಒಂದು ಮಠವನ್ನು ಕಟ್ಟಿಸಿ ಆದಕ್ಕೆ ಶೂನ್ಯಸಿಂಹಾಸನವೆಂದು ಹೆಸರಿಟ್ಟನೆಂದು ವಿರಕ್ತರಿಗೆ ಅತಿಮಾನ್ಯವಾದ ಪ್ರಭುಲಿಂಗಲೀಲೆಯ ೨೧ನೆಯ ಅಧ್ಯಾಯದಲ್ಲಿ ಬರೆಯಲ್ಪಟ್ಟಿರುತ್ತದೆ.

ಹೃದಂತರಸ್ಥಂ ಸುದೃಢಂ ವಿಭಾವ್ಯ ತದ್ಬಹಿಶ್ಚ ಪೂಜಾರ್ಥಮಮುಷ್ಯ ಸದ್ಗುರೋಃ । ಸ ಶೂನ್ಯಸಿಂಹಾಸನಮೇಕಮದ್ಭುತಂ ಸುಶಿಲ್ಪಿನಾ ಕಾರಯಿತುಂಸಮುದ್ಯತಃ ॥೧೫॥ ಸ ತಪ್ತಜಾಂಬೂನದರಾಶಿಮುಜ್ವಲಂ ಮಹಾರ್ಘ ರತ್ನೌಘಚಯಂ ಸಮಾನಯತ್ । ಕ್ಷಿತೌ ಕ್ರಿಯಾಕೌಶಲವತ್ಸುಶಿಲ್ಪಿನಃ ಸಮಾಹ್ವಯಾಮಾಸ ವಿಚಾರ್ಯ ಪಂಡಿತೈಃ ॥೧೬॥ ತದಾಜ್ಞಯಾ ನಿರ್ಮಮಿರೇ ಸುಶಿಲ್ಪಿನಃ ಸುಧಾಂಶುಕಾಂತೋಪಲಕುಟ್ಟಿಮಂಪುರಃ । ತಥಾಸ್ಯ ಸೋಪಾನತತೀರ್ಹರಿನ್ಮಣಿ ಸುಹೀರಗೋಮೇಧಿಕವಾಲವಾಯುಜೈಃ ॥೧೭॥

ಇವೇ ಮೊದಲಾದ ಪದ್ಯಗಳಿಂದ ಬಸವನು ತನ್ನ ಕಾಲದಲ್ಲಿಯೇ ಶೂನ್ಯಸಿಹ್ಮಾಸನವೆಂಬ ಹೆಸರಿನದೊಂದು ಮಠವನ್ನು ಕಟ್ಟಿಸಿದನೆಂದೂ ಆದಕ್ಕಿಂತಲೂ ಮೊದಲು ಮಠವು ಇದ್ದಿಲ್ಲವೆಂದೂ ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗೂ ಪ್ರಭುಲಿಂಗಲೀಲೆಯ ೧೧ನೆಯ ಅಧ್ಯಾಯದಲ್ಲಿ—

ಶ್ರಯಂತಿ ಯನ್ನಿಶ್ಚಲಭಕ್ತಿನಿಷ್ಠಿತಾಃ ಶಿವೈಕತಾನಾಃ ಸ್ಥಲಮತ್ರ ತೇ ವಯಂ। ಸಮೇತ್ಯ ಭಿಕ್ಷಾಂ ಶಿವಭಕ್ತಿಲಕ್ಷಣಾಂ ಸದಾಽರ್ಥಯಂತೋ ವಿಚರಾಮ ವಿಷ್ಟಪೇ ॥೧೯॥ ಅಹಂಹಿ ನಾಮ್ನಾಽಭವಮಲ್ಲಮಪ್ರಭುರ್ನಯತ್ರಕುತ್ರಾಪಿ ಕುಟೀರಮಸ್ತಿಮೇ ॥ ನಚ ಕ್ರಿಯಾ ವಾ ನ ತಪೋ ನ ಸಾಧನಂ ನ ಸಂಸ್ಥಿತಿಶ್ಚೇತ್ಯುದಿತೋಽವಧೃತ್ಯಮ್ಭುತಂ ॥೨೦॥

ಈ ಪ್ರಕಾರವಾಗಿ ಅಲ್ಲಮನು ಗೊಗ್ಗಯ್ಯನಮುಂದೆ ಎಲ್ಲಿಯೂ ತನಗೆ ಸ್ಥಾನವೇ ಇಲ್ಲೆಂದು ಮೊದಲು ಹೇಳಿದ್ದಾನೆ. ಆದರೆ ಕೆಲವು ದಿನಗಳು ಹೋದಮೇಲೆ ಕಲ್ಯಾಣಕ್ಕೆ ಬಂದನಂತರ ಬಸವನು ಅವನಿಗೆ ಮಠವನ್ನು ಕಟ್ಟಿಸಿಕೊಟ್ಟಿದ್ದಾನೆ; ಇದೇ ಯಥಾರ್ಥತತ್ತ್ವವಿರುತ್ತದೆಯೇ ಹೊರತು ಬೇರೊಂದು ಇಲ್ಲ. ಹೀಗಿದ್ದು ನಾಲ್ಕೂ ಯುಗಗಳಲ್ಲಿ ಪೀಠವಿರುತ್ತದೆನ್ನುವದು ಅತ್ಯಂತ ತಪ್ಪಿರುತ್ತದೆ. ಯಾಕಂದರೆ—ಈ ಶಾಸ್ತ್ರಗಳು ಕೊಟ್ಟಿರುವ ಶ್ಲೋಕಗಳಿಂದಲೂ ಈ ತರಹದ ಅಭಿಪ್ರಾಯವು ಹೊರಡುವದಿಲ್ಲ. ಹಾಗೂ ಪ್ರಭುಲಿಂಗಲೀಲೆಯ ಮೇಲಿಂದಲೂ ಹೊರಡುವದಿಲ್ಲ. ಇದಲ್ಲದೆ ಐತಿಹಾಸಿಕದೃಷ್ಟಿಯಿಂದ ನೋಡಿದರೂ ಹೊರಡುವದಿಲ್ಲ. ಈ ಎಲ್ಲ ವಿಚಾರಗಳಿಂದ ೧೨ ನೆಯ ಶತಮಾನದಿಂದೀಚೆಗೆ ವಿರಕ್ತಮಠಗಳು ಆದವೇ ಹೊರತು ಪೂರ್ವದಲ್ಲಿದ್ದಿಲ್ಲವೆಂದು ನಿಶ್ಚಯವು. ಆದರೆ ೧೨ನೆಯ ಶತಮಾನದಿಂದಾಚೆಗೆ ವಿರಕ್ತರೇ ಇದ್ದಿಲ್ಲವೇನು? ಎಂದು ಕೆಲವರಿಗೆ ಶಂಕೆಯುತ್ಪನ್ನವಾಗಬಹುದು. ಆದರೆ ವಿರಕ್ತಾಶ್ರಮಗಳು ಎಂದಿಗಾದರೂ ಇದ್ದವುಗಳೇ! ಪೂರ್ವದಲ್ಲಿ ವಿರಕ್ತರು ತಮ್ಮ ಯಥಾರ್ಥನಾಮಕ್ಕನುಸರಿಸಿ ವೈರಾಗ್ಯವೃತ್ತಿಯಿಂದಿದ್ದು ಈಗಿನ ವಿರಕ್ತರಂತೆ ಮಠಮಾನ್ಯಾದಿಗಳನ್ನು ಕಟ್ಟಿಕೊಳ್ಳದೆ ಘೋರವಾದ ಅರಣ್ಯದಲ್ಲಿ ವಾಸಮಾಡಿ ವೇದಾಗಮಗಳ ಅಭಿಪ್ರಾಯದಂತೆ ಮಠಸ್ಥಾಪನಾಚಾರ್ಯರಿಂದ ಮುಕ್ತಿಮಾರ್ಗದರ್ಶಕವಾದ ಷಟ್ಸ್ಥಲೋಪದೇಶವನ್ನು ಪಡೆದುಕೊಂಡು ಅವರ ಶಿಷ್ಯರಾಗಿ ವರ್ತಿಸುತ್ತಿದ್ದರು. ಇದೇ ಮೂಲತತ್ವವು. ಇರಲಿ; ಮತ್ತೆ ಕೆಲವರು ಶ್ರೀಮತ್ಪಂಚಾಚಾರ್ಯರು ವೀರಶೈವಮತವನ್ನು ಸ್ಥಾಪನಮಾಡಿದರೆಂದೂ, ತನ್ಮೂಲಕ "ಶಿಷ್ಯಪಾಪಂ ಗುರೋಃ" ಎಂಬ ವಾಕ್ಯಾನುಸಾರವಾಗಿ ಆ ಸರ್ವದೋಷವು ಪಂಚಾಚಾರ್ಯರನ್ನಂಟಿಕೊಂಡಿತೆಂದೂ, ಅವರು ತಮಗೆ ಪ್ರಾಪ್ತವಾದ ದೋಷವನ್ನು ದೂರಮಾಡಿಕೊಳ್ಳುವುದಕ್ಕೋಸ್ಕರ ಪರಮೇಶ್ವರನನ್ನು

ಕುರಿತು ಪ್ರಾರ್ಥನೆಯನ್ನು ಮಾಡಿದರೆಂದೂ, ಅವರ ಪ್ರಾರ್ಥನಾನುಸಾರ ವಾಗಿ ತನ್ನ ಗೋಪ್ಯಮುಖದಿಂದ ನಿರಂಜನನೆಂಬ ಗಣಾಧೀಶ್ವರನನ್ನು ಹುಟ್ಟಿಸಿ ನಾಲ್ಕೂ ಯುಗಗಳಲ್ಲಿ ಶ್ರೀ ಪಂಚಾಚಾರ್ಯರ ಉದ್ಧಾರಕ್ಕೋಸ್ಕರ ಕಳುಹಿದನೆಂದೂ, ಈ ವಿಷಯವು ಅಚಿಂತ್ಯಾಗಮದಲ್ಲಿ ಬರೆಯಲ್ಪಟ್ಟಿರುವುದೆಂದೂ ಹೇಳುತ್ತಾರೆ. ಹಾಗೂ ಪ್ರಸಿದ್ಧಮಾಡಿದ್ದಾರೆ. ವಾಚಕರೇ! ಇದು ಎಷ್ಟರಮಟ್ಟಿಗೆ ಸತ್ಯವಿರಬಹುದೆನ್ನುವುದನ್ನು ನೀವೇ ವಿಚಾರಿಸಿರಿ! ಯಾಕೆಂದರೆ— ಈ ವಿಷಯವು ಅಚಿಂತ್ಯಾಗಮದಲ್ಲಿ ಇರುವುದೆಂದು ಆಧಾರವನ್ನು ಕೊಡುತ್ತಾರೆ. ಅಚಿಂತ್ಯ ಎಂಬ ಆಗಮದ ಹೆಸರು ೨೮ ಮುಖ್ಯ ಶೈವಾಗಮಗಳಲ್ಲಿಯೂ ಇಲ್ಲ, ಹಾಗೂ ಉಪಾಗಮಗಳಲ್ಲಿಯೂ ಇಲ್ಲ. ಚಿಂತ್ಯಾಗಮವೆಂದು ಒಂದು ಆಗಮವಿರುತ್ತದೆ. ಅದರಲ್ಲಿ ಇವರ ಅಭಿಪ್ರಾಯದಂತೆ ಈ ವಿಷಯವು ಇರುವುದಿಲ್ಲ. ಅಂದಮೇಲೆ ಈ ಆಗಮವು ಎಲ್ಲಿಂದ ಬಂದಿತು? ಒಂದು ಪಕ್ಷದಲ್ಲಿ ಇದೇ ಸತ್ಯವಾದ ಆಗಮವೆಂದು ಗ್ರಹಿಸೋಣ! ಕೃತಯುಗದಲ್ಲಿ ಏಕಾಕ್ಷರ ಶಿವಾಚಾರ್ಯ-ದ್ವ್ಯಕ್ಷರಶಿವಾಚಾರ್ಯ-ತ್ರ್ಯಕ್ಷರಶಿವಾಚಾರ್ಯ-ಚತುರಕ್ಷರ ಶಿವಾಚಾರ್ಯ-ಪಂಚಾಕ್ಷರಶಿವಾಚಾರ್ಯರೆಂಬ ಹೆಸರುಗಳಿಂದ ಪಂಚಾಚಾರ್ಯರು ಪ್ರಸಿದ್ಧರಾದರು. ಇವರ ಉದ್ಧಾರಕ್ಕೋಸ್ಕರ ನಿರಂಜನ ಎಂಬ ಹೆಸರಿನಿಂದ ಒಂದು ಮೂರ್ತಿಯು ಅವತರಿಸಿತು. ತ್ರೇತಾಯುಗದಲ್ಲಿ- ಏಕಮುಖಶಿವಾಚಾರ್ಯ, ದ್ವಿಮುಖ ಶಿವಾಚಾರ್ಯ, ತ್ರಿಮುಖ ಶಿವಾಚಾರ್ಯ, ಚತುರ್ಮುಖ ಶಿವಾಚಾರ್ಯ, ಪಂಚಮುಖ ಶಿವಾಚಾರ್ಯರೆಂಬ ಹೆಸರುಗಳಿಂದ ಪಂಚಾಚಾರ್ಯರು ಅವತರಿಸಿದರು. ಇವರ ಉದ್ಧಾರಕ್ಕೋಸ್ಕರ ನಿರ್ಮಾಯ ಎಂಬ ಹೆಸರಿನಿಂದ ಆ ಮೂರ್ತಿಯು ಬಂದಿತು. ದ್ವಾಪರಯುಗದಲ್ಲಿ ರೇಣುಕಶಿವಾಚಾರ್ಯ, ದಾರುಕಶಿವಾಚಾರ್ಯ, ಘಂಟಾಕರ್ಣಶಿವಾಚಾರ್ಯ, ವಿಶ್ವಕರ್ಣಶಿವಾಚಾರ್ಯರೆಂಬ ಹೆಸರುಗಳಿಂದ ಪಂಚಾಚಾರ್ಯರು ಅವತರಿಸಿದರು. ಇವರ ಉದ್ಧಾರಕ್ಕೋಸ್ಕರ ನಿಷ್ಕಲ

ಎಂಬ ಹೆಸರಿನಿಂದ ಅವತರಿಸಿತು. ಕಲಿಯುಗದಲ್ಲಿ ರೇವಣಾರಾಧ್ಯ, ಮರುಲಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ರೆಂಬ ಹೆಸರುಗಳಿಂದ ಆಚಾರ್ಯರು ಅವತರಿಸಿದರು. ಇವರ ಉದ್ಧಾರ ಕ್ಕೋಸ್ಕರ ಅಲ್ಲಮ ಎಂಬ ಹೆಸರಿನಿಂದ ಅವತರಿಸಿತೆಂದು ಅಚಿಂತ್ಯಾಗ ಮದಲ್ಲಿರುವದೆಂದು ಇವರ ಅಭಿಪ್ರಾಯವಿರುತ್ತದೆ. ಇದರ ಮೇಲೆ ಸ್ವಲ್ಪ ವಿಚಾರಿಸೋಣ! ಅದೇನೆಂದರೆ—ಕೃತಯುಗ, ತ್ರೇತಾಯುಗ, ದ್ವಾಪರಯುಗಗಳಲ್ಲಿ ಶ್ರೀ ಪಂಚಾಚಾರ್ಯರೂ ಹಾಗೂ ಇವರ ಅಭಿಪ್ರಾ ಯದಂತೆ ನಿರಂಜನಮೂರ್ತಿಯೂ ಯಾವ ಯಾವ ಕಾಲಕ್ಕೆ ಅವತಾರ ಮಾಡಿದರೋ? ಹಾಗೂ ತೆರಳಿದರೋ? ಗೋಚರವಾಗುವುದಿಲ್ಲ. ಯಾಕಂದರೆ—ಆಗಿನ ಕಾಲದ ಇವರ ಯಾವ ಚರಿತ್ರಗಳೂ ಸಿಗುವುದಿಲ್ಲ. ಹಾಗೂ ನಿರಂಜನಮೂರ್ತಿಯ ಚರಿತ್ರವಾದರೂ ಸಿಗುವುದಿಲ್ಲ. ಕಲಿಯು ಗದಲ್ಲಿ ಅವತಾರಮಾಡಿದ ರೇವಣಾರಾಧ್ಯಾದಿಶ್ರೀಮತ್ಪಂಚಾಚಾರ್ಯರ ಸಾಧಾರಣ ಇತಿಹಾಸಗಳು ದೊರೆಯುತ್ತವೆ. ಹಾಗೂ ಕಲಿಯುಗದಲ್ಲಿ ವಿರಕ್ತರ ಅಭಿಪ್ರಾಯದಂತೆ ಇವರ ಉದ್ಧಾರಕ್ಕೋಸ್ಕರ ಅವತಾರ ವನ್ನೆತ್ತಿದ ಅಲ್ಲಮನ ಇತಿಹಾಸವಾದರೂ ದೊರೆಯುತ್ತದೆ. ಇವರೆಲ್ಲರ ಕಾಲಮಾನವನ್ನು ಇತಿಹಾಸದೃಷ್ಟಿಯಿಂದ ನೋಡೋಣ! ವಾಚಕರೇ! ಅಲ್ಲಮನು ಬಸವನ ಕಾಲಕ್ಕೆ ಅಂದರೆ ೧೨ ನೆಯ ಶತಮಾನದಲ್ಲಿ ಜನಿ ಸಿದನೆಂದು ಅನೇಕ ಆಧಾರಗಳಿಂದ ತಿಳಿದುಬರುತ್ತದೆ. ಇದನ್ನು ಸರ್ವರೂ ಒಪ್ಪುತ್ತಾರೆ; ಅರ್ಥಾತ್ ಇಂದಿಗೆ ಅಲ್ಲಮನು ಜನಿಸಿ ೭೫೦— ೭೬೦ ವರ್ಷಗಳಾಗಬಹುದು. ಅಲ್ಲಮನು ಕಲಿಯುಗದಲ್ಲಿ ಅವತಾರ ಮಾಡಿದ ಶ್ರೀ ರೇವಣಸಿದ್ಧಾದಿಪಂಚಾಚಾರ್ಯರ ಉದ್ಧಾರಕ್ಕೋಸ್ಕರ ಬಂದ ಮೇಲೆ ಆ ಕಾಲದಲ್ಲಿ (೧೨ ನೆಯ ಶತಮಾನದಲ್ಲಿ) ಶ್ರೀಮತ್ಪಂ ಚಾಚಾರ್ಯರು ಅವಶ್ಯವಾಗಿರಬೇಕಲ್ಲವೇ? ಹಾಗೆ ಪಂಚಾಚಾರ್ಯರು ಇದ್ದರೇನು? ಇಲ್ಲ; ಎಷ್ಟೋ ಸಾವಿರ ವರುಷಗಳ ಪೂರ್ವದಲ್ಲಿ ಈ

ಲೋಕವನ್ನು ಬಿಟ್ಟು ತೆರಳಿದ್ದಾರೆ. ಕಾಶೀ ಸಿಂಹಾಸನಾಧೀಶ್ವರರಾದ ಶ್ರೀಮಜ್ಜಗದ್ಗುರು ವಿಶ್ವಾರಾಧ್ಯರು ಇಂದಿಗೆ ೩೯೨೦ ವರ್ಷಗಳ ಪೂರ್ವದಲ್ಲಿ ಶಿವಲೋಕಕ್ಕೆ ತೆರಳಿದರೆಂದು ಆ ಪೀಠದ ವಂಶಾವಲಿ ಯಿಂದ ತಿಳಿದುಬರುತ್ತದೆ. ಹಾಗೂ ವಿಶ್ವಾರಾಧ್ಯರು ಕುಳಿತುಕೊಂಡಿ ರುವ ಕಲ್ಲಿನ ಪೀಠವು ಇಂದಿನವರೆಗೂ ಆ ಮಠದಲ್ಲಿ ಉಂಟು. ಆ ಕಲ್ಲು ನಾಲ್ಕು ಸಾವಿರ ವರ್ಷಗಳದಿರಬಹುದೆಂದು ಮಹಾಮಹಾಲಿಂಗ ಡಾಕ್ಟ ರರು ಅಭಿಪ್ರಾಯಪಟ್ಟಿದ್ದಾರೆ. ಆ ಕಲ್ಲು ಅತ್ಯಂತ ಪ್ರಾಚೀನ ಕಾಲದ್ದಿರೋಣದರಿಂದ ಮುಟ್ಟಿದ ಕೂಡಲೇ ಮಣ್ಣು ಆಗಿ ಹೋಗು ತ್ತದೆ. ಕಲ್ಲು ಮಣ್ಣಿನ ರೂಪವಾಗಬೇಕಾದರೆ ಎಷ್ಟು ಸಾವಿರ ವರ್ಷಗಳ ದಿರಬಹುದೆಂದು ಪ್ರತಿಯೊಬ್ಬನಿಗೂ ಮೇಲೆಯೇ ತಿಳಿದುಬರುತ್ತದೆ; ಬೇಕಾದವರು ನೋಡಿ ತಿಳಿದುಕೊಳ್ಳಬಹುದು. ಅದು ನಾಶವಾಗಬಾರ ದೆಂದು ಈಗ ಅದರ ಮೇಲೆ ಬೇರೆ ಕಲ್ಲುಗಳ ರಿಪೇರಿಯು ಮಾಡಿಸಲ್ಪ ಟ್ಟಿರುತ್ತದೆ.

ಆ ವಿಶ್ವಾರಾಧ್ಯರ ಪೀಠದ ಕೆಳಗೆ ದ್ವಾಪರಯುಗದ ವಿಶ್ವಕರ್ಣ ಶಿವಾಚಾರ್ಯರ ಪೀಠವುಂಟು. ಅಲ್ಲಿ ಹೋಗಲಿಕ್ಕೆ ಉತ್ತಮವಾದ ಮಾರ್ಗ ವುಂಟು. ಆದರೂ ಹೋಗಲಿಕ್ಕೆ ಯಾರೂ ಸಮರ್ಥರಾಗುವುದಿಲ್ಲ. ನಾಲ್ವತ್ತುಮೂರು ಪಾವಟಿಗೆಗಳವರೆಗೆ ಒಬ್ಬೊಬ್ಬರು ಹೋಗುತ್ತಾರೆ. ಅದರಮುಂದೆ ಪಾವಟಿಗಳಿರದೆ ೧ ಫೂಟು ಅಗಲ, ೧ ಫೂಟು ಉದ್ದ, ಇಂಥದೊಂದು ಸಣ್ಣ ದ್ವಾರವುಂಟು. ಅದರೊಳಗಿಂದ ಹಾಯ್ದು ಮುಂದೆ ೮೪ ಪಾವಟಿಗೆಗಳನ್ನು ಇಳಿದಮೇಲೆ ದ್ವಾಪರಯುಗದ ವಿಶ್ವಕರ್ಣ ಶಿವಾಚಾರ್ಯರ ಪೀಠವುಂಟು. ಈ ಪೀಠವನ್ನು ಈಗ ಸುಮಾರು ೭೫-೮೦ ವರ್ಷಗಳ ಪೂರ್ವದಲ್ಲಿದ್ದ ಆ ಸಿಂಹಾಸನದ ೭೮ನೆಯ ಪಟ್ಟಾಧಿಕಾರಿಗಳಾದ ಶ್ರೀಮಜ್ಜಗದ್ಗುರು ಶಿವಲಿಂಗ ಶಿವಾ ಚಾರ್ಯ ಮಹಾಸ್ವಾಮಿಗಳೆಂಬ ಶಿವಯೋಗಿ ಶಿಖಾಮಣಿಗಳು ಕಂಡು

ಬಂದರೆಂದು ವದಂತಿಯುಂಟು. ಇರಲಿ; ಕಾಶೀ ಜಗದ್ಗುರು ವಿಶ್ವಾರಾಧ್ಯರ ಪೀಠಕ್ಕೆ ಅಧಿಪತಿಗಳಾದ ಮಲ್ಲಿಕಾರ್ಜುನ ಶಿವಾಚಾರ್ಯರೆಂಬವರಿಗೆ ಜಯನಂದದೇವನೆಂಬ ಕಾಶಿಯ ಅರಸನು ವಿಕ್ರಮಾರ್ಕಸಂವತ್ ೬೩೧ ಕಾರ್ತಿಕಶುದ್ಧ ೧೧ ಯಲ್ಲಿ ಅಂದರೆ ಕ್ರಿಸ್ತಶಕದ ೫೭೪ ರಲ್ಲಿ ಜಂಗಮಪುರವೆಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿಕೊಟ್ಟದ್ದಾನೆ. ಈ ದಾನಶಾಸನವು ಈಗಲೂ ಸಿಂಹಾಸನದಲ್ಲುಂಟು. ಈ ಶಾಸನವು ಗವರ್ನಮೆಂಟಿನವರಲ್ಲಿಯೂ ಕೂಡ ನಮೂದಾಗಿರುತ್ತದೆ. ಇದಲ್ಲದೆ ನೇಪಾಲದೇಶಾಂತರ್ಗತ ಭಾತಗಾಂವ ಎಂಬ ಊರಲ್ಲಿ ಬಹುಕಾಲದಿಂದ ಶ್ರೀಮಜ್ಜಗದ್ಗುರು ವಿಶ್ವಾರಾಧ್ಯ ಸಿಂಹಾಸನದ ಶಾಖಾಮಠವು ಜಂಗಮವಾಡೀಮಠವೆಂಬ ಹೆಸರಿನಿಂದ ಪ್ರಸಿದ್ಧವಿರುತ್ತದೆ. ಆ ಮಠದಲ್ಲಿ ಒಂದು ಸಂಸ್ಕೃತ*ಶಿಲಾಲೇಖವುಂಟು. ಅದರಲ್ಲಿ ಹಿಂದಕ್ಕೆ ನೇಪಾಳ ದೇಶವನ್ನು ಆಳುತ್ತಿದ್ದ ಜಯರುದ್ರಮಲ್ಲ ಮೊದಲಾದ ಅನೇಕಜನ ರಾಜರು ವೀರಶೈವರಿದ್ದರೆಂದೂ ಇತ್ತೀಚೆಗೆ ಗಂಗಾದೇವಿಯೆಂಬ ಹೆಂಡತಿಯಿಂದಲೂ ತ್ರೈಲೋಕ್ಯಮಲ್ಲ ತ್ರಿಭುವನಮಲ್ಲರೆಂಬ ಇಬ್ಬರು ಮಕ್ಕಳಿಂದಲೂ ಕೂಡಿದ ವಿಶ್ವಮಲ್ಲನೃಪತಿಯೆಂಬ ರಾಜನು ದೈವ

---

* ಶ್ರೀವಿಶ್ವಮಲ್ಲ ನೃಪತೇ ರ್ಗಂಗಾದೇವೀ ಸುತೌ ಸುಷುವೇ |
ತ್ರೈಲೋಕ್ಯಮಲ್ಲ ಭೂಪ ಸ್ತ್ರಿಭುವನಮಲ್ಲಶ್ಚ ಭೂಪಾಲೌ ||
ಶೈವಪ್ರೀತಿಮಿಮಾಂಚ ದೈವವಶತೋ ನಷ್ಟಾಂಪುನಃ ಸೃಷ್ಟವಾನ್ |
ಸೃಷ್ಟಾಂಚಾಪಿ ಶಿವಾರ್ಪಿತಾಂ ಪ್ರತಿದಧೇ ಶೈವಾಗಮಾಚಾರತಃ ||
ಶೈವಾಚಾರಕೃಶಃ ಶಿವಾಗಮವಿಧೇಃ ಶೈವಾಃ ಶಿವಾಲಂಬನಾಃ |
ಕಿಂವಾ ಸಂತಿ ನಸಂತಿ ಹಂತ ಜಗತಿಪ್ರಖ್ಯಾತ ಸತ್ಕೀರ್ತಯೇ ||
ಕಿಂತು ಕ್ಷಾಂತಿ ವಿವೇಕಶಾಂತಿ ಪರಮಾನಂದೈಕ ವೀರಪ್ರಭುಃ |
ವೇದಶ್ರೀಯುತ ಮಲ್ಲಿಕಾರ್ಜುನಕೃತಿಃ ಶೈವಶ್ಚ ತತ್ತ್ವಂಪರಂ ||

ಇವೇ ಮೊದಲಾದ ಅನೇಕ ಶ್ಲೋಕಗಳು ಆದಿಯಲ್ಲಿದ್ದು, ಕಾಣಿಕೆಯಾಗಿ ಕೊಟ್ಟಿರುವ ಭೂಮಿಯ ವಿಷಯವು ನೇಪಾಲಭಾಷೆಯಲ್ಲಿ ಬರೆಯಲ್ಪಟ್ಟಿರುತ್ತದೆ.

ವಶಾತ್ ವಿಷ್ಣುಭಕ್ತನಾದನೆಂದೂ ಪುನಃ ಮಲ್ಲಿಕಾರ್ಜುನಸ್ವಾಮಿಗಳೆಂಬ ವರು ಆವನನ್ನು ವೀರಶೈವನನ್ನಾಗಿ ಮಾಡಿದರೆಂದೂ ಆ ಮಠದ ಪೂಜಾ ವಿನಿಯೋಗಕ್ಕಾಗಿ ಆ ವಿಶ್ವಮಲ್ಲನೃಪತಿಯು ೨೦೦ ಮೂರೀಭೂಲಾ ಎಂಬ ಹೆಸರಿನಿಂದ ಪ್ರಸಿದ್ಧವಾದ ಭೂಮಿಯನ್ನು ಇನಾಮಾಗಿ ಹಾಕಿ ಕೊಟ್ಟಿರುವನೆಂದೂ ಆ ಶಿಲಾಲೇಖದ ಮೇಲಿಂದ ತಿಳಿದುಬರುತ್ತದೆ. ಆ ಶಿಲಾಲೇಖವನ್ನು ಬರೆದುಕೊಟ್ಟ ಮಿತಿಯು ವಿಕ್ರಮಾರ್ಕಸಂವತ್ ೬೯೨ ಜ್ಯೇಷ್ಠ ಶುದ್ಧ ೮ ಎಂದು ಇರುತ್ತದೆ. ಅಂದರೆ ಕ್ರಿಸ್ತಶಕ ೬೩೫ ರಲ್ಲಿ ಕೊಟ್ಟಂತಾಯಿತು. ಈ ಎಲ್ಲ ಇನಾಮುಗಳು ಆ ಸಿಂಹಾಸನದ ೫೧ ನೆಯ ಪಟ್ಟದವರಿಗೆ ಸಿಕ್ಕಿರುತ್ತವೆ. ಈಗಿರತಕ್ಕ ಮಹಾಸ್ವಾಮಿಗಳು ೮೨ ನೆಯ ಪಟ್ಟದವರೆಂದು ಆ ಮಠದ ಪಟ್ಟಾವಲಿಯಿಂದ ತಿಳಿದು ಬರುತ್ತದೆ. ಇರಲಿ: ಉಜ್ಜಯಿನೀ ಮಹಾಸಂಸ್ಥಾನದಲ್ಲಿ ಒಂದು ಅತ್ಯಂತ ಪ್ರಾಚೀನ ಶಿಲಾಲೇಖವಿರುತ್ತದೆ. ಆದನ್ನು ಆ ಸಿಂಹಾಸನದ ಅಧಿಪತಿಗಳಾದ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾ ಮಿಗಳವರು ಉತ್ತಮರೀತಿಯಿಂದಿಟ್ಟಿರುತ್ತಾರೆ. ಆ ಶಿಲಾಲೇಖವನ್ನು ಕದಂಬಕುಲದವನಾದ ಪಾಂಡ್ಯನೆಂಬ ರಾಜನು ಬರೆಸಿರುವನೆಂದು ಆದರಲ್ಲಿ ಉಲ್ಲೇಖವಿರುತ್ತದೆ. ಕದಂಬಕುಲವು ಕ್ರಿ. ಶ. ೩ನೆಯ ಶತಮಾನದಲ್ಲಿ ತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ. ಆದರಲ್ಲಿ ಪಾಂಡ್ಯರಾಜನ ವರ್ಣನವೇ ವಿಶೇಷವಿರುತ್ತದೆ. ಆ ಶಿಲಾಲೇಖವು ಮರುಲಸಿದ್ಧೇಶ್ವರ ದೇವಾಲಯವನ್ನು ಕಟ್ಟಿಸಿದ ಸಂಬಂಧಿಯೆಂದು ಕಂಡುಬರುತ್ತದೆ. ಆದ ರಲ್ಲಿ ಮಿತಿಯನ್ನು ಹಾಕಿಲ್ಲ. ಯಾಕೆ ಹಾಕಿಲ್ಲವೋ ತಿಳಿಯದು; ಆದರಲ್ಲಿ ಬರೆಯುವ ಅಕ್ಷರಗಳ ಪದ್ಧತಿಯನ್ನು ವಿಚಾರಮಾಡಿ ನೋಡುತ್ತಿರಲಾಗಿ ಅತ್ಯಂತ ಪ್ರಾಚೀನವೆಂದು ಕಂಡುಬರುತ್ತದೆ. ಯಾಕಂದರೆ—ಆ ಕನ್ನಡ ಲಿಪಿಯು ದೇವನಾಗರಿ ಲಿಪಿಗನುಸರಿಸಿ ಬರೆದದ್ದಿರುತ್ತದೆ. ಹೇಗೆಂದರೆ, ಕನ್ನಡದಲ್ಲಿ ಅಕ್ಷರಗಳ ಮುಂದೆ (೦) ಪೂಜೆಯನ್ನು ಕೊಡುತ್ತಾರೆ;

ದೇವನಾಗರಿಯಲ್ಲಿ ಅಕ್ಷರದ ಮೆಲ್ಭಾಗದಲ್ಲಿ ಕೊಡುತ್ತಾರೆ. ಆ ಅಕ್ಷರ ಗಳು ಕನ್ನಡದವಾದಾಗ್ಯೂ ಮುಂದೆ ಪೂಜೆಗಳನ್ನು ಕೊಡದೆ ಮೇಲೆ ಕೊಟ್ಟಿರುತ್ತಾರೆ. ಕನ್ನಡ ಲಿಪಿಯು ಹುಟ್ಟಿದಾಗ ದೇವನಾಗರಿಯಂತೆ ಬರೆಯುವ ಪದ್ಧತಿಯಿತ್ತೆಂದು ಅನೇಕರ ಮತವುಂಟು.

ಈ ಎಲ್ಲ ವಿಚಾರಗಳಿಂದ ಈ ಶಿಲಾಲೇಖವು ೧೬-೧೭ ನೂರು ವರ್ಷಗಳ ಪೂರ್ವದ್ದೆಂದು ಕಂಡುಬರುತ್ತದೆ. ಈ ಸಂಸ್ಥಾನದಲ್ಲಿ ಮತ್ತೆ ಕೆಲವು ಶಿಲಾಲೇಖಗಳಿರುತ್ತವೆ. ಆದಾಗ್ಯೂ ಅವು ೫೦೦-೬೦೦ ವರ್ಷ ಗಳಿಂದೀಚಿನವು ಇರುತ್ತವೆ. ಇರಲಿ; ಇದಲ್ಲದೆ, ಶ್ರೀ ರೇಣುಕಾಚಾರ್ಯರು ಕಲಿಯುಗದಲ್ಲಿ ಸುಮಾರು ೩೩೦೦ ವರ್ಷಗಳ ಪೂರ್ವದಲ್ಲಿ ಅವತಾರಮಾಡಿದರೆಂದು ತಿಳಿದುಬರುತ್ತದೆ. ಶ್ರೀ ರೇಣುಕಾಚಾರ್ಯರ ಉಕ್ತಿಗಳನ್ನು ಸಂಗ್ರಹಿಸಿದ ಸಿದ್ಧಾಂತಶಿಖಾಮಣಿಯ ಕರ್ತನು ಆರನೆಯ ಶತಮಾನದಲ್ಲಿದ್ದನೆಂದು ಸಿದ್ಧವಾಗುತ್ತದೆ. ಅಂದಮೇಲೆ ಶ್ರೀ ರೇಣುಕಾಚಾರ್ಯರ ಶಿವಲೋಕಗಮನಕಾಲವು ಬಹಳ ದೂರದಲ್ಲಿಯೇ ಉಳಿಯಿತು. ಆ ಪೀಠದಲ್ಲಿ ಕೆಲವು ಶಿಲಾಲೇಖಗಳುಂಟು. ಅವು ಬಹು ಪ್ರಾಚೀನ ಕಾಲದವಿರೋಣದರಿಂದ ೨—೩ ಶಿಲಾಲೇಖಗಳಲ್ಲಿ ಒಂದು ಅಕ್ಷರವೂ ಕೂಡ ಕಾಣುವದಿಲ್ಲ. ಒಂದೆರಡು ಶಿಲಾಲೇಖಗಳು ಸ್ವಚ್ಛವಿದ್ದರೂ ಕ್ರಿಸ್ತಶಕ ೧೫ನೆಯ ಶತಮಾನದಿಂದೀಚಿನವಿರುತ್ತವೆ. ಆ ಮಠದ ವಂಶಾವಲಿಯು ಬಹುಕಾಲದಿಂದಿರುವದು. ಕಲಿಯುಗದಲ್ಲಿ ಶ್ರೀ ರೇವಣಾರಾಧ್ಯರನ್ನು ಮೊದಲ್ಗೊಂಡು ಈಹೊತ್ತಿನವರೆಗೆ ೧೧೭ ಜನರು ಅಧಿಕಾರಿಗಳಾಗಿರುತ್ತಾರೆ. ಇರಲಿ; ಇದಲ್ಲದೆ ಪಂಡಿತಾರಾಧ್ಯರಾದರೂ ಎಷ್ಟೋ ಸಾವಿರ ವರ್ಷಗಳ ಪೂರ್ವದಲ್ಲಿಯೇ ಶಿವಲೋಕಕ್ಕೆ ತೆರಳಿರುತ್ತಾರೆ. ಈ ಪೀಠದ ವರ್ಣನವು ವ್ಯಾಸಮಹರ್ಷಿಪ್ರಣೀತ ಸ್ಕಂದಪುರಾಣಾಂತರ್ಗತ "ಶ್ರೀಶೈಲಖಂಡ" ದಲ್ಲಿ ಚನ್ನಾಗಿ ಕಂಡುಬರುತ್ತದೆ. ಶ್ರೀಶೈಲ, ಸಿದ್ಧಾಪುರ, ಹಾಗೂ ಕಾಲ್ಪಿ ಮೊದಲಾದ ಸ್ಥಾನಗಳಲ್ಲಿ ಆ

ಪೀಠದ ಬಗ್ಗೆ ಪ್ರಾಚೀನ ಶಿಲಾಲೇಖಗಳು ಇರುತ್ತವಂತೆ! ಇರಲಿ. ಇದಲ್ಲದೆ ಏಕೋರಾಮರಾಧ್ಯರಾದರೂ ಬಹು ಪ್ರಾಚೀನರಿರುತ್ತಾರೆ. ಈ ಬಗ್ಗೆ ಹಿಮಾಲಯದಲ್ಲಿ ಅನೇಕ ದಾಖಲೆಗಳುಂಟು. ಈ ಪೀಠಕ್ಕೆ ಈ ಹೊತ್ತಿನವರೆಗೆ ಮೂರುನೂರರ ಮೇಲ್ಪಟ್ಟು ಅಧಿಕಾರಿಗಳಾಗಿರುತ್ತಾರೆ. "ನಾನಾಕ್ಷೇತ್ರೈಃ ಪುಣ್ಯತಮಂ ನಾನಾಪೀಠಸುಯಂತ್ರಿತಂ" ಎಂದು ಈ ಪೀಠದ ಬಗ್ಗೆ ಸ್ಕಂದಪುರಾಣಾಂತರ್ಗತಕೇದಾರಖಂಡದಲ್ಲಿ ಉಲ್ಲೇಖ ವುಂಟು. ಹಾಗೂ ೧೧ ನೆಯ ಶತಮಾನದಲ್ಲಿದ್ದ ಶ್ರೀಪತಿಪಂಡಿತರು ತಮ್ಮ ಶ್ರೀಕರಭಾಷ್ಯದ ಆದಿಯಲ್ಲಿ—

ಶ್ರೀಮದ್ದಂಡ ಶಿಖೋಪವೀತ ವಿಲಸತ್ಕಂಥಾಜಿನಾಲಂಕೃತಃ ।
ಕಾಷಾಯಾಂಬರ ಕುಂಡಿಕಾಪ್ರಣವ ಪಾತ್ರಚ್ಛತ್ರಮೌಂಜೀಧರಃ ।
ವೇದಾಂತೋಭಯವಾಕ್ಪ್ರಬೋಧಿತಲಸಚ್ಛ್ರೀಭಸ್ಮಘಂಟೀ
ಯುತಃ ।
ಏಕೋರಾಮಯತೀಂದ್ರಶೇಖರಶಿವಾಚಾರ್ಯಸ್ಸದಾಪಾತುನಃ ।

ಈ ಪ್ರಕಾರವಾಗಿ ಕಲಿಯುಗದಲ್ಲಿ ಹಿಮಾಲಯ ಸಿಂಹಾಸನ ಸ್ಥಾಪಕರಾದ ಜಗದ್ಗುರು ಏಕೋರಾಮ ಶಿವಾಚಾರ್ಯರನ್ನು ಸ್ತೋತ್ರ ಮಾಡಿದ್ದಾರೆ. ಈ ಎಲ್ಲ ಆಧಾರಗಳಿಂದ ಎಷ್ಟೋ ಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀಮಜ್ಜಗದ್ಗುರು ಪಂಚಾಚಾರ್ಯರು ಜೀರ್ಣವಾದ ವೀರ ಶೈವಮತವನ್ನು ಪುನಃ ಸ್ಥಿರಗೊಳಿಸಿ ಕೈಲಾಸಕ್ಕೆ ತೆರಳಿದ್ದಾರೆಂದು ಸ್ಪಷ್ಟ ವಾಗಿ ಕಂಡುಬರುತ್ತದೆ. ಈ ಎಲ್ಲ ವಿಚಾರಗಳಿಂದ ೧೨ನೆಯ ಶತಮಾ ನದಲ್ಲಿ ಬಂದ ಅಲ್ಲಮನ ಕಾಲದಲ್ಲಿ ಪಂಚಾಚಾರ್ಯರಿದ್ದರೆಂದು ಸಿದ್ಧ ವಾಗುವುದೋ? ಅಂದಮೇಲೆ ಕಲಿಯುಗದಲ್ಲಿ ರೇವಣಾರಾಧ್ಯಾದಿ ಪಂಚಾಚಾರ್ಯರ ಉದ್ಧಾರಕ್ಕೋಸ್ಕರ ಅಲ್ಲಮನು ಬಂದನೆಂದು ಹೇಳುವ ನಮ್ಮ ವಿರಕ್ತಮಹಾಶಯರ ವಚನಗಳೂ ಹಾಗೂ ಅವರು ತೋರಿಸುವ ಅಚಿಂತ್ಯಾಗಮದ ಆಧಾರಗಳೂ ಯಾವ ಗುದ್ದನ್ನು ಹೊಕ್ಕವು? ವಾಚ

ಕರೇ! ಈ ಆಧಾರಗಳು ಎಷ್ಟು ಸತ್ಯವಿರಬಹುದೆನ್ನುವದನ್ನು ನೀವೇ ವಿಚಾರಿಸಿರಿ. ಈ ಪ್ರಕಾರವಾಗಿ ಕಾಲನಿರ್ಣಯಕ್ಕೆ ಹಚ್ಚಿದಕೂಡಲೆ ನಮ್ಮ ವಿರಕ್ತಮಹಾಶಯರು ಚಟ್ಟನೆ ಆ ಹಾದಿಯನ್ನು ಬಿಟ್ಟು ಮತ್ತೊಂದು ಹಾದಿಯನ್ನು ಹಿಡಿಯುತ್ತಾರೆ. ಅದೇನೆಂದರೆ—ರೇವಣಾರಾಧ್ಯಾದಿ ಪಂಚಾಚಾರ್ಯರು ಅಲ್ಲ; ಅವರ ಪೀಠಕ್ಕೆ ಅಧಿಕಾರಿಗಳಾದ ಪಂಚಾಚಾರ್ಯರ ಉದ್ಧಾರಕ್ಕೋಸ್ಕರ ಅಲ್ಲಮನು ಬಂದನು; ಅವನು ಬಂದಕಾಲದಲ್ಲಿ ಪೀಠಾಧಿಕಾರಿಗಳು ಇದ್ದೇಇದ್ದರೆಂದು ಅನ್ನುತ್ತಾರೆ. ಪಾಠಕರೇ ಇವರ ಮೊದಲಿನ ಅಭಿಪ್ರಾಯವು ಏನು ಇರುತ್ತದೆ? ಯಾರು ವೀರಶೈವಮತವನ್ನು ಸ್ಥಾಪನಮಾಡುವುದಕ್ಕೋಸ್ಕರ ನಾಲ್ಕೂ ಯುಗಗಳಲ್ಲಿ ಬೇರೆಬೇರೆ ಹೆಸರುಗಳಿಂದ ಪ್ರಸಿದ್ಧರಾಗಿ ಕೈಲಾಸದಿಂದ ಬರುತ್ತಾರೆಯೋ? ಕೇವಲ ಅವರ ಉದ್ಧಾರಕ್ಕೋಸ್ಕರವೇ ಈ ನಿರಂಜನ ಮೂರ್ತಿಯಾದರೂ ನಾಲ್ಕೂ ಯುಗಗಳಲ್ಲಿ ಅವತಾರಮಾಡುವುದೆಂದು ಇರುತ್ತದಲ್ಲವೇ? ಹೀಗಿದ್ದು ಈ ರೀತಿಯಾಗಿ ಅಡ್ಡ ತಿಡ್ಡ ಓಡಾಡಿದ ಮೇಲೆ ನಮ್ಮ ವಿರಕ್ತಮಹಾಶಯರ ವಚನಗಳು ಒಂದಾದರೂ ಸ್ಥಿರವಾಗುವದಿಲ್ಲವಲ್ಲವೆ? ಈ ಎಲ್ಲ ವಿಚಾರಗಳಿಂದ ನೋಡುತ್ತಿರಲು ಇವರು ಕೊಟ್ಟಿರುವ ಅಚಿಂತ್ಯಾಗಮದ ಹಾಗೂ ಸ್ವಯಂಭುವಾಗಮದ ಆಧಾರಗಳೆಲ್ಲವೂ ಕುಕಲ್ಪನೆಗಳೆಂದು ಸ್ಪಷ್ಟವಾಗಿ ತೋರುತ್ತದೆ. ಹೇಗೆ ಇವರ (ವಿರಕ್ತರ) ಪ್ರಭುಲಿಂಗಲೀಲೆಯು ಭವಿಷ್ಯತ್ಪುರಾಣಾಂತರ್ಗತವಾದುದೋ ಹಾಗೆಯೇ ಇವರ ಸ್ವಯಂಭುವಾಗಮದ ಹಾಗೂ ಅಚಿಂತ್ಯಾಗಮದ ಈ ಶ್ಲೋಕಗಳಾದರೂ ಆಗಮದ ಸ್ವರೂಪವನ್ನು ತದಂತರ್ಗತಗಳಾಗಿ ಹೊಂದಿರುತ್ತವೆಂದು ನಿಶ್ಚಯವಾಗಿ ತಿಳಿಯತಕ್ಕದ್ದು. ಈ ಎಲ್ಲ ಆಧಾರಗಳಿಂದ ಕಲಿಯುಗದಲ್ಲಿ ಬಂದ ಅಲ್ಲಮನ ಅವತಾರವೇ ಸುಳ್ಳಾದಮೇಲೆ ಉಳಿದ ಮೂರೂ ಯುಗಗಳಲ್ಲಿಯ ನಿರಂಜನ, ನಿರ್ಮಾಯ ಹಾಗೂ ನಿಷ್ಕಲರ ಅವತಾರವು ಸುಳ್ಳೇ ಆಯಿತು. ಒಟ್ಟಿಗೆ ಇವೆಲ್ಲವು

ಗಳೂ ಕಲ್ಪನೆಗಳೆಂದು ಸಿದ್ಧಾಂತವು! ಇರಲಿ; ನಮ್ಮ ಶಾಸ್ತ್ರಿಮಹಾಶಯರು ತೋರಿಸುವ ಸ್ವಯಂಭುವಾಗಮದ ಶ್ಲೋಕಗಳಲ್ಲಿ ವಿರಕ್ತರಿಗೆ ವಜ್ರದ ಕಲಶವೆಂದು ತೋರಿಬರುತ್ತದೆ. ಇದೂ ಕೂಡ ಆಡಂಬರ ಮಾತ್ರವಲ್ಲದೆ ಯಥಾರ್ಥವಿರುವುದಿಲ್ಲ. ಯಾಕಂದರೆ—ಹಿಂದುಸ್ಥಾನದಲ್ಲಿ ಒಂದು ಬೆಟ್ಟಡಿಕೆಯಷ್ಟು ಕೂಡ ವಜ್ರವು ಸಿಗುವುದಿಲ್ಲ. "ಕೊಹಿನೂರ" ಎಂಬ ವಜ್ರವು ಲಿಂಬೆಹಣ್ಣಿನ ಅರ್ಧದಷ್ಟು ಇದ್ದು ಅದು ಸದ್ಯಃ ನಮ್ಮ ಇಂಡಿಯಾ ಸಾರ್ವಭೌಮರ ಕಿರೀಟದಲ್ಲಿ ವಿರಾಜಿಸುತ್ತದೆ. ಇಂಥ ದೊಡ್ಡವಜ್ರವು ಇಡೀ ಭೂಮಂಡಲದಲ್ಲಿಲ್ಲವೆಂದಮೇಲೆ ನಮ್ಮ ವಿರಕ್ತ ಮಹಾಶಯರಿಗೆ ಕೊಡವನ್ನು ಮಾಡಿಸುವಷ್ಟು ದೊಡ್ಡವಜ್ರವು ಎಲ್ಲಿಂದ ಸಿಕ್ಕಿರಬಹುದು? ಸದ್ಯಃ ಇಂಥ ವಜ್ರದ ಕಲಶವು ಯಾವ ವಿರಕ್ತ ಮಹಾಶಯರಲ್ಲಿರುವುದೆನ್ನುವುದನ್ನು ಪ್ರಕಟಿಸಿದರೆ ಒಳ್ಳೆಯದಾಗುವುದು. ವಾಚಕರೇ! ವಜ್ರಕಲಶದ ಚರಿತ್ರವನ್ನು ನೋಡಿದಿರಾ? ಸರ್ವವೂ ಸುಳ್ಳೇ ಆಡಂಬರವು. ಹೀಗೆ ವಜ್ರಕಲಶವು ವಿರಕ್ತರದೆಂದು ಮೂರ್ಖ ಜನರ ಮುಂದೆ ಅಪಲಪಿಸುತ್ತ, ಪಂಚಕಲಶಗಳ ಸಂಗಡ ಮತ್ತೊಂದು ಕಲಶವನ್ನು ಸ್ಥಾಪನಮಾಡಿ ಆರುಕಲಶಗಳನ್ನು ಮಾಡುತ್ತಾರೆ. ವ್ಯಾಸೋಕ್ತ ಶಿವಪುರಾಣಾದಿಗಳನ್ನು ನೋಡಿರಿ? ಆಗಮುಗಳನ್ನು ನೋಡಿರಿ? ವೀರಶೈವಮತಗ್ರಂಥಗಳನ್ನು ನೋಡಿರಿ? ಅನಾದಿತೋಂಟದ ಸಿದ್ಧೇಶ್ವರನ ವಚನವನ್ನು ನೋಡಿರಿ? ನಿಜಗುಣಾರ್ಯರ ವಿವೇಕ ಚಿಂತಾಮಣಿ ಮೊದಲಾದ ಗ್ರಂಥಗಳನ್ನು ನೋಡಿರಿ? ಎಲ್ಲಿ ನೋಡಿದರೂ ಪಂಚಕಲಶಗಳೆಂದು ದೊರೆಯುತ್ತದೆಯೋ ಹೊರತು ಷಟ್‌ಕಲಶ ಗಳೆಂದು ಎಲ್ಲಿಯೂ ದೊರೆಯುವುದಿಲ್ಲ. ಆರುಕಲಶಗಳನ್ನು ಸ್ಥಾಪಿಸು ವುದು ಶಾಸ್ತ್ರಸಮ್ಮತವಾಗಿದ್ದರೆ ಪಂಚಕಲಶಸ್ಥಾಪನವೆಂದು ಯಾರೂ ಅನ್ನುತ್ತಿದ್ದಿಲ್ಲ. ಪಲ್ಲಕ್ಕಿಯಮೇಲೆ ಕುಳಿತು ತಮ್ಮ ಮಸ್ತಕದ ಮೇಲೆ ಇಟ್ಟುಕೊಳ್ಳುವುದಕ್ಕೋಸ್ಕರ ಆ ಜಗದ್ಗುರು ಪಂಚಾಚಾರ್ಯರ ಚಿಹ್ನ

ಗಳಾದ ಪಂಚಕಲಶಗಳ ಬಿರುದನ್ನು ಗವರ್ನಮೆಂಟಿನವರಿಗೆ ಲಕ್ಷಾವಧಿ ರೂಪಾಯಿಗಳನ್ನು ಖರ್ಚುಮಾಡಿಕೊಂಡು ಬೇಡಿಕೊಳ್ಳದೆ ಷಟ್‌ಕಲಶದ ಬಿರುದನ್ನು ಬೇಡಿಕೊಳ್ಳುತ್ತಿದ್ದರು. ಸರ್ವಪ್ರಾಚೀನಗ್ರಂಥಕಾರರು ಮಾನ್ಯಮಾಡದೆ ಇದ್ದ ಈ ವಿಷಯವನ್ನು ಅರ್ವಾಚೀನನಾದ ಯಾವನಾದರೊಬ್ಬನು ಬೇರೆ ತತ್ತ್ವದಿಂದ ಬರೆದಾಗ್ಯೂ ಅದರ ತತ್ತ್ವವನ್ನು ತಿಳಿಯದೆ ಆ ವಿಷಯವು ನಮ್ಮ ಪರವಾಗಿಯೇ ಇರುವುದೆಂದು ತಿಳಿದುಕೊಳ್ಳುವುದು ಎಂಥ ಮೂರ್ಖತನವು ?

' ನಿವೃತ್ತಕರ್ಮಭಾರತ್ವಾನ್ನಿರಾಭಾರ ಇತಿ ಸ್ಮೃತಃ'' ಎಂಬ ಆಗಮೋಕ್ತಿಯಂತೆ ವಿರಕ್ತನು ಕರ್ಮದಿಂದ ದೂರನಾದಮೇಲೆ ಪುನಃ ಅವನ ಚಿಹ್ನವನ್ನು ಕರ್ಮದಲ್ಲಿ ಸಂಬಂಧಮಾಡಿಕೊಳ್ಳುವುದೇತಕ್ಕೆ ? ಅಮಂಗಲಕ್ಕೋಸ್ಕರವೇನು ? ಇರಲಿ ! ಕೆಲವರು ಈ ವಿಷಯದಲ್ಲಿ ಏನು ಅಭಿಪ್ರಾಯಪಡುತ್ತಾರೆಂದರೆ—ಪಂಚಕಲಶಗಳನ್ನು ಸ್ಥಾಪಿಸಿದ ಮೇಲೆ ಅವುಗಳ ಕೆಳಗೆ ನಕಾರ, ಮಕಾರ, ಶಿಕಾರ, ವಾಕಾರ, ಯಕಾರಗಳನ್ನು ಬರೆಯಬೇಕಾಗುತ್ತದೆ. ಆದರೆ ಓಂಕಾರವನ್ನು ಎಲ್ಲಿ ಬರೆಯುತ್ತೀರಿ? ಆದ್ದರಿಂದಲೇ ಇನ್ನೊಂದು ಕಲಶವು ಬೇಕೆಂದೆನ್ನುತ್ತಾರೆ. ಮಹಾಶಯರೇ ! ಓಂಕಾರವು ಏತಕ್ಕೆ ಬೇಕು? ಪಂಚಾಕ್ಷರೀ ಮಂತ್ರದಿಂದಲೇ ಗತಾರ್ಥವಾಗುತ್ತಿರಲಿಕ್ಕೆ ಇನ್ನೊಂದು ಹೆಚ್ಚಿನ ಅಕ್ಷರವನ್ನು ಏಕೆ ಕೂಡಿಸಬೇಕು? ಕೂಡಿಸತಕ್ಕದ್ದೇ ಎಂದ ಪಕ್ಷದಲ್ಲಿ ಪ್ರಸಾದಪಂಚಾಕ್ಷರೀ, ಮಾಯಾಪಂಚಾಕ್ಷರೀ ಮೊದಲಾದ ಯಾವತ್ತು ಮಂತ್ರಗಳಲ್ಲಿದ್ದ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ ಕಾರಗಳನ್ನಾದರೂ ಏಕೆ ಬಿಡುವಿರಿ? ಈ ಎಲ್ಲ ಅಕ್ಷರಗಳಿಗೋಸ್ಕರ ಪುನಃ ಐದು ಕಲಶಗಳನ್ನು ಹೆಚ್ಚಿಗೆ ಮಾಡಿರಿ ; ಒಟ್ಟಿಗೆ ಹನ್ನೊಂದು ಕಲಶಗಳಾಗಲಿ, ಹೀಗೆ ಮನಸ್ಸಿಗೆ ಬಂದಂತೆ ಸ್ವಾರ್ಥಕ್ಕೋಸ್ಕರ ಕುಕಲ್ಪನೆಗಳನ್ನು ಮಾಡುತ್ತ, ಶಿವಾಗಮಗಳಲ್ಲಿರತಕ್ಕ ಪಂಚಕಲಶಸಂಬಂಧಗಳಾದ ಸಮಸ್ತ

ವಾಕ್ಯಗಳಿಗೆ ಬರೆಯನ್ನು ಹಾಕಿದಲ್ಲಿ ಶಿವದ್ರೋಹವು ಅರ್ಥಾತ್ ಸಿದ್ಧವಾಗುವದಲ್ಲವೇ ? ಆದಕಾರಣ ಅತ್ಯಂತನಿಂದಾಸ್ಪದವಾದ ಈ ಅಶಾಸ್ತ್ರೀಯ ಮಾರ್ಗವನ್ನು ಬಿಟ್ಟು, ಶಾಸ್ತ್ರೀಯಮಾರ್ಗವೆನಿಸಿಕೊಂಡ ಪಂಚಕಲಶಗಳನ್ನೇ ಸ್ಥಾಪಿಸಿ, ಯಾವತ್ತು ಕಾರ್ಯಗಳನ್ನು ತೀರಿಸಿ ಕೊಳ್ಳತಕ್ಕದ್ದು. ಪಂಚಾಕ್ಷರೀಮಂತ್ರವು ಪ್ರಸಾದಪಂಚಾಕ್ಷರೀ, ಮಾಯಾಪಂಚಾಕ್ಷರೀ, ಸ್ಥೂಲಪಂಚಾಕ್ಷರೀ, ಸೂಕ್ಷ್ಮಪಂಚಾಕ್ಷರೀ, ಮೂಲಪಂಚಾಕ್ಷರೀ ಎಂಬ ಹೆಸರುಗಳಿಂದ ಐದುವಿಧವಾಗಿ ರುತ್ತದೆಂದೂ, ಪಂಚಕಲಶಗಳಿಗೆ ಅಧಿಪತಿಗಳಾದ ಒಬ್ಬೊಬ್ಬ ಆಚಾರ್ಯರು ಕ್ರಮವಾಗಿ ಆ ಆ ಮಂತ್ರಗಳನ್ನು ಉಪದೇಶಿಸ ಬೇಕೆಂದೂ ಆಗಮಗಳು ಸಾರಿ ಸಾರಿ ಹೇಳುತ್ತವೆ. ಆದರೆ ಆರನೆಯ ಕಲಶಕ್ಕೆ ಅಧೀಶರೆಂದು ಹೇಳಿಸಿಕೊಳ್ಳುವ ನಮ್ಮ ವಿರಕ್ತ ಮಹಾಶಯ ರಿಗೆ ಉಪದೇಶಿಸಲಿಕ್ಕೆ ಯಾವ ಪಂಚಾಕ್ಷರೀ ಮಂತ್ರವಿರಬಹುದು ? ಇವರ ವಿಷಯದಲ್ಲಿ ಹೊಸದಾಗಿ ಪರಮಾತ್ಮನು ಮತ್ತೊಂದು ಮಂತ್ರ ವನ್ನು ರಚಿಸಿಕೊಡಬೇಕಾಗಿರುತ್ತದೆ. ಇರಲಿ ; ಈ ಎಲ್ಲ ಪೂರ್ವಾಪರ ವಿಚಾರಗಳಿಂದ ಆರು ಕಲಶಗಳನ್ನು ಸ್ಥಾಪನಮಾಡಬಾರದೆಂಬುದೇ ಶಾಸ್ತ್ರಸಿದ್ಧಾಂತವು. ವೀರಶೈವಸದಾಚಾರಸಂಗ್ರಹದಲ್ಲಿರತಕ್ಕ " ಬ್ರಹ್ಮ ವೇದಸ್ತದಧ್ಯೇತಾ ಬ್ರಹ್ಮಚಾರೀತಿ ಗೀಯತೇ " ಇತ್ಯಾದಿ ಶ್ಲೋಕ ಗಳಿಂದ ಪಟ್ಟಾಧಿಕಾರಿಗಳು ಚರಾಧಿಕಾರಿಗಳು ಹಾಗೂ ನಿರಾಭಾರಿಗಳು ಶಿಷ್ಯವರ್ಗದಲ್ಲಿ ಸೇರಿರುವ ವಿಷಯವು ಸಣ್ಣ ಹುಡುಗರಿಗೂ ಕೂಡ ತಿಳಿ ದುಬರುತ್ತದೆ. ಹೀಗಿದ್ದು ಪಂಡಿತರಿಗೆ ಇದರ ಅರ್ಥಯೋಜನೆಯನ್ನು ಮಾಡಲಿಕ್ಕೆ ಬಂದಿಲ್ಲವೆಂದು ಅಂದುಕೊಂಡು ಅಗಾಧ ಪಾಂಡಿತ್ಯವುಳ್ಳ ನಮ್ಮ ಶಾಸ್ತ್ರಿಮಹಾಶಯರು ನಿರಾಭಾರಿಪದಕ್ಕೆ ಬ್ರಹ್ಮಚಾರಿ ನಿರಾಭಾರಿ ಎಂದು ಅರ್ಥವನ್ನು ಮಾಡಿಕೊಂಡಿರುತ್ತಾರೆ. ಶಾಸ್ತ್ರಿಗಳೇ ! ನಿಮ್ಮ ಮಿದುಳು ಎಷ್ಟು ಸೂಕ್ಷ್ಮವಿರಬಹುದು ? ಬ್ರಹ್ಮಚಾರಿ ಪಟ್ಟಾಧಿಕಾರಿಗಳು,

ಬ್ರಹ್ಮಚಾರಿ ಚರಾಧಿಕಾರಿಗಳು, ಬ್ರಹ್ಮಚಾರಿ ನಿರಾಭಾರಿಗಳು ಬೇರೆ, ಹಾಗೂ ಪಟ್ಟಾಧಿಕಾರಿಗಳು, ಚರಾಧಿಕಾರಿಗಳು, ನಿರಾಭಾರಿಗಳು ಬೇರೆ, ಎಂದರೆ ಅವರು ಯಾರು ಯಾರು ಎನ್ನುವುದನ್ನು ಹೇಗೆ ವಿಂಗಡಿಸುವಿರಿ? ನಿಮ್ಮ ಅಭಿಪ್ರಾಯವನ್ನನುಸರಿಸಿದ್ದಾದರೆ ಯಾವಾಗ್ಗೆ ನಿರಾಭಾರಿಯು ಶಿಷ್ಯನಾಗಲಿಲ್ಲವೋ ಅದರ ಹಿಂದೆಯೇ ಪಟ್ಟಚರಾಧಿಕಾರಿಗಳಾದರೂ ಶಿಷ್ಯರಾಗಲಿಲ್ಲ. ತಿಳಿಯದೆ ಹೀಗೆ ಮನಸ್ಸಿಗೆ ಬಂದಂತೆ ಬರೆದರೆ ಜನರಾದರೂ ನಗಲಿಕ್ಕಿಲ್ಲವೆಂದು ತಿಳಿಯಲಿಲ್ಲವೇನು? ವಾಚಕರೇ! ಹೀಗೆ ನಮ್ಮ ಈ ಶಾಸ್ತ್ರಿಗಳು ತಮ್ಮಲ್ಲಿ ಅಜ್ಞಾನದ ಮುಟ್ಟೆಯನ್ನಿಟ್ಟುಕೊಂಡು ಯಥಾರ್ಥ ಧರ್ಮಶಾಸ್ತ್ರಜ್ಞರಾದ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರಿಗೆ ಕಾವ್ಯತೀರ್ಥರೆಂಬ ಪದವಿಯು ಗೋಮಂಡಲದಂತೆ ಇರುವುದೆಂದು ಬರೆದಿರುತ್ತಾರೆ. ವಹವಾ ಶಾಸ್ತ್ರಿಗಳೇ! ನಿಮ್ಮ ಬುದ್ಧಿಯನ್ನು ವರ್ಣಿಸಲಿಕ್ಕೆ ಸೃಷ್ಟಿಕರ್ತನಾದ ಬ್ರಹ್ಮನೂ ಕೂಡ ಸಮರ್ಥನಾಗಲಾರನು. ಇಂಥ ಮಹಾ ಬುದ್ಧಿಶಾಲಿಗಳಾದ ನಿಮಗೆ ಹೆಚ್ಚಿಗೆ ಹೇಳುವುದೇನದೆ? ಇರಲಿ;

“ ಏಕಏವ ಶಿವಃ ಸಾಕ್ಷಾತ್ಸರ್ವಾನುಗ್ರಹಕಾರಕಃ |
ಗುರುಜಂಗಮಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ || ”

ಇತ್ಯಾದಿ ಸಿದ್ಧಾಂತಶಿಖಾಮಣಿಯ ಪದ್ಯಗಳನ್ನು ಜಂಗಮವಿಷಯವಾಗಿ ಶಾಸ್ತ್ರಿಗಳು ಉದಾಹರಿಸಿರುತ್ತಾರೆ. ಇದು ಸತ್ಯವೇ ಇರುತ್ತದೆ. ಜಂಗಮರೆಂದರೆ ಗುರುಸ್ಥಲದ ಚರಮೂರ್ತಿಗಳೇ ಆಗುತ್ತಾರೆಂದು ಈ ಮೊದಲೇ ಅನೇಕ ಪ್ರಮಾಣಗಳಿಂದ ನಿರ್ಣಯಿಸಲ್ಪಟ್ಟಿರುತ್ತದೆ. “ ಕ್ರಿಮಿಕೀಟಪತಂಗೇಭ್ಯಃ ” ಇತ್ಯಾದಿ ಶಂಕರಸಂಹಿತೆಯ ಶ್ಲೋಕಗಳೆಲ್ಲವೂ ಯಾರ ಪರವಾಗಿರುತ್ತವೆನ್ನುವ ವಿಷಯವು ಮೊದಲೇ ಬರೆಯಲ್ಪಟ್ಟಿದೆ; ತಿಳಿದುಕೊಳ್ಳಬೇಕು. ಹೀಗಿದ್ದು ಯಥಾರ್ಥತತ್ವವನ್ನು ವಿಚಾರ ಮಾಡದೆ ಧಡಂಪ್ರವೇಶಮಾಡುವವರು ವನಮಹಿಷರೋ ಸಾವಧಾನದಿಂದ ಶಾಸ್ತ್ರದ ಯಥಾರ್ಥಸಿದ್ಧಾಂತವನ್ನು ಹೊರಗೆಡುವವರು ವನ

ಮಹಿಷರೋ ಎನ್ನುವುದನ್ನು ಜಾಣಾಕ್ಷರಾದ ವಾಚಕರೇ ತಿಳಿದುಕೊಳ್ಳ ತಕ್ಕದ್ದು. ಒಟ್ಟಿಗೆ ನಮ್ಮ ಶಾಸ್ತ್ರಿಗಳು ಪಂಡಿತರಿಂದ ಪ್ರಕಟಿಸಲ್ಪಟ್ಟ ವೇದಮಾನ್ಯವಾದ ಸಿದ್ಧಾಂತದ ಕಡೆಗೆ ಲಕ್ಷ್ಯಗೊಡದೆ ಪರಪ್ರೇರಣೆಯಿಂದಲೋ ಅಥವಾ ಸ್ವಬುದ್ಧಿಯಿಂದಲೋ ದುರ್ವಾಕ್ಯಗಳಕಡೆಗೆ ಲಕ್ಷ್ಯಗೊಟ್ಟು "ಹೆಸರಿಗೆ ಹಾಲಪ್ಪ ಮನೆಯಲ್ಲಿ ಮಜ್ಜಿಗೆ ಇಲ್ಲ" ಎಂಬ ಗಾದೆಯಂತೆ ವ್ಯರ್ಥವಾಗಿ ಖಂಡನವೆಂದು ಹೆಸರಿಟ್ಟುಕೊಂಡು ಪ್ರಸಿದ್ಧಮಾಡಿರುವುದು ಇವರಿಗೆ ಒಂದು ತರಹದ ಕಲಂಕವೇ ಸರಿ! ಯಥಾರ್ಥ ತತ್ವವನ್ನು ತಿಳಿಯಲಿಚ್ಛೆಯುಳ್ಳ ವೀರಶೈವರೇ! ಪಂಡಿತರಿಂದ ರಚಿಸಲ್ಪಟ್ಟ ಸನ್ಯಾಸಾಶ್ರಮವಿಮರ್ಶವೆಂಬ ಗ್ರಂಥವನ್ನೂ ಅದಕ್ಕೆ ಈ ಶಾಸ್ತ್ರಿಗಳು ಬರೆದಿರುವ ಖಂಡನವನ್ನೂ ಪರಮತದ ಪಂಡಿತರಿಗೆ ತೋರಿಸಿರಿ. ಇದಕ್ಕೆ ಖಂಡನವೆಂದು ಹೆಸರನ್ನು ಕೊಡುತ್ತಾರೆಯೋ ಹೇಗೆ ನೀವೇ ನೋಡಿರಿ; ಹೀಗಿದ್ದು ನಮ್ಮ ಶಾಸ್ತ್ರಿಗಳು ಯಥಾರ್ಥ ವೇದಮಾನ್ಯವಾದ ಸಿದ್ಧಾಂತವನ್ನು ತಿಳಿಯದೆ ತಮ್ಮ ಸಿಟ್ಟು ತೀರಿಸಿಕೊಳ್ಳುವದಕ್ಕೋಸ್ಕರ ಎಷ್ಟು ದುರ್ವಾಕ್ಯಗಳನ್ನುಪಯೋಗಿಸಿರುತ್ತಾರೆಯೋ ಅವೆಲ್ಲವುಗಳನ್ನೂ ಕೂಡಿಸಿ ಒಂದು ಮಾಲಿಕೆಯನ್ನು ಮಾಡಿ ಇವರಿಗೇ ಆಗಲಿ ಅಥವಾ ಇವರ ಪ್ರೇರಕರಿಗೇ ಆಗಲಿ ಹಾಕಿದ್ದಾದರೆ ಅತ್ಯಂತ ಭೂಷಣವೆನಿಸುತ್ತದೆ. ಯಾಕಂದರೆ—ಯಾರಿಗೆ ಯಾವ ಆಭರಣಗಳನ್ನು ಹಾಕಬೇಕೋ ಅವುಗಳನ್ನೇ ಹಾಕಬೇಕಲ್ಲವೇ? ಇರಲಿ;

ನಗುರೋರಧಿಕಂ ತತ್ತ್ವಂ ನಗುರೋರಧಿಕಂ ತಪಃ ।
ತಸ್ಮಾತ್ಪರತರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ ॥
ಮನ್ನಾಥಃ ಶ್ರೀಜಗನ್ನಾಥೋ ಮದ್ಗುರುಃ ಶ್ರೀಜಗದ್ಗುರುಃ ।
ಮಮಾತ್ಮಾ ಸರ್ವಭೂತಾತ್ಮಾ ತಸ್ಮೈ ಶ್ರೀ ಗುರವೇ ನಮಃ ॥
ಧ್ಯಾನಮೂಲಂ ಗುರೋರ್ಮೂರ್ತಿಃ ಪೂಜಾಮೂಲಂ ಗುರೋಃ ಪದಂ ।

ಮಂತ್ರಮೂಲಂ ಗುರೋರ್ವಾಕ್ಯಂ ಮೋಕ್ಷಮೂಲಂ ಗುರೋಃ
ಕೃಪಾ ||

ಇತಿ ಗುರುಗೀತಾಯಾಂ.

ಗುರುರೇವಾತ್ರ ಸರ್ವೇಷಾಂ ಕಾರಣಂ ಸಿದ್ಧಿಕರ್ಮಣಾಂ |
ಗುರುರೂಪೋ ಮಹಾದೇವೋ ಯತಃ ಸಾಕ್ಷಾದುಪಸ್ಥಿತಃ ||
ನಿಷ್ಕಲೋಹಿ ಮಹಾದೇವೋ ನಿತ್ಯಜ್ಞಾನಮಹೋದಧಿಃ |
ಸಕಲೋ ಗುರುರೂಪೇಣ ಸರ್ವಾನುಗ್ರಾಹಕೋ ಭವೇತ್ ||
ಯಃ ಶಿವಃ ಸಗುರುರ್ಜ್ಞೇಯೋ ಯೋ ಗುರುಃ ಸಶಿವಃ ಸ್ಮೃತಃ|
ನ ತಯೋರಂತರಂ ಕುರ್ಯಾತ್ ಜ್ಞಾನಾವಾಪ್ತ್ಯೈಮಹಾಮತಿಃ ||
ಹಸ್ತಪಾದಾದಿಸಾಮ್ಯೇನ ನೇತರೈಃ ಸದೃಶಂ ವದೇತ್ |
ಆಚಾರ್ಯಂ ಜ್ಞಾನದಂ ಶುದ್ಧಂ ಶಿವರೂಪತಯಾ ಸ್ಥಿತಂ ||
ಆಚಾರ್ಯಸ್ಯಾವಮಾನೇನ ಶ್ರೇಯಃಪ್ರಾಪ್ತಿರ್ವಿಹನ್ಯತೇ |
ತಸ್ಮಾನ್ನಿಶ್ರೇಯಸಃ ಪ್ರಾಪ್ತ್ಯೈ ಪೂಜಯೇತ್ತಂ ಸಮಾಹಿತಃ ||

ಇತಿ ಸಿದ್ಧಾಂತಶಿಖಾಮಣೌ.

ಗುರುಃಶಿವೋ ಗುರುರ್ಮಂತ್ರೋ ಗುರುರ್ಮಾತಾ ಗುರುಃಪಿತಾ|
ಗುರುರ್ಭ್ರಾತಾ ಗುರುರ್ಬಂಧುರ್ಗುರುರ್ಮಿತ್ರಂ ಗುರುರ್ಧನಂ ||
ಗುರುರ್ಲೋಕೋ ಗುರುರ್ಮುಕ್ತಿರ್ಗುರುರ್ಭೋಗೋ
ಗುರುಃಸುಖಂ |
ಗುರುರ್ವೇದೋ ಗುರುಃಶಾಸ್ತ್ರಂ ಗುರುರ್ಯೋಗೋ ಗುರುಃ
ಫಲಂ ||
ಗುರುರ್ದಾನಂ ಗುರುರ್ಧರ್ಮೋ ಗುರುರ್ದೈವಂ ಗುರುರ್ಮತಿಃ |
ಗುರುರ್ನೇತ್ರಂ ಗುರುರ್ವಕ್ತ್ರಂ ಗುರುರ್ವಾಣೀ ಗುರುರ್ಮನಃ ||
ಗುರುಃಸರ್ವಂ ಗುರುಃಸತ್ತ್ವಂ ಗುರುರೇವ ಪರಃ ಶಿವಃ ||

ಇತಿ ಸಿದ್ಧಾಂತಶೇಖರೇ.

ಕದಾಚಿದಪಿ ಶಿಷ್ಯೋಽನ್ಯೈ ನ ನಿಂದೇದೀಶ್ವರಂ ಗುರುಂ ।
ಶಿವಸ್ಯಚ ಗುರೋರ್ನಿಂದಾಂ ತಥಾ ನಶ್ರುಣುಯಾತ್ಸದಾ ॥
ಗುರುಂ ನಿಂದತಿ ಯಃ ಶಿಷ್ಯೋ ದ್ರವ್ಯಂ ಹರತಿ ತಸ್ಯಚ ।
ಕರೋತಿ ದ್ವೇಷಿಭಿಃ ಸ್ನೇಹಂ ಸಚಂಡಾಲೋ ನಸಂಶಯಃ ॥
ಸನ್ಮಾನಂ ಗುರುಭಾಷಾಯಾಂ ಗುರೋಃ ಶಿಷ್ಯೋ ಯ ಇಚ್ಛತಿ ।
ಸ ಮಹಾಪಾತಕೀ ಜ್ಞೇಯಃ ಪತತ್ಯೇವ ಸುದುರ್ಗತೌ ॥
ಯಃ ಪಶ್ಯತಿ ಗುರುಂ ಶಿಷ್ಯ ಉದಾಸೀನಮನೀಷಯಾ ।
ಸ ಪಾಪಾತ್ಮಾ ಮಹಾಘೋರೇ ನರಕೇ ಪರಿವರ್ತತೇ ॥
ದೂರತೋ ಯೋ ಗುರುಂ ದೃಷ್ಟ್ವಾ ಚೋದಾಸೀನತಯಾ ವ್ರಜೇತ್ ।
ಶ್ವಾನಯೋನಿಶತಂ ಗತ್ವಾ ಭವೇಚ್ಚಂಡಾಲವೇಶ್ಮನಿ ॥
ಸಮಸ್ತದೇವತಾವಾಸಂ ಸರ್ವಮಂತ್ರಾಸ್ಪದಂ ಗುರುಂ ।
ಉಪೇಕ್ಷತೇ ಯಃ ಪಾಪಾತ್ಮಾ ರೌರವಂ ನರಕಂವ್ರಜೇತ್ ॥
ಹೃದಿ ನಾಯಂ ಮಹಾಚಾರ್ಯ ಇತ್ಯುಪೇಕ್ಷಾಂ ಕರೋತಿ ಚೇತ್ ॥
ಮಯಿಭಕ್ತಿರ್ವೃಥಾ ತಸ್ಯ ತಥೈವಚ ಸಮರ್ಚನಂ ॥
ಯೋಗ್ಯಮಾದ್ಯಂ ಗುರುಂತ್ಯಕ್ತ್ವಾ ಶಿಷ್ಯಃ ಕ್ಷುದ್ರಕ್ರಿಯಾನ್ವಿತಂ ।
ಗುರುಂ ಸಮಾಶ್ರಯೇದನ್ಯಂ ಯಃ ಸ ಯಾತಿ ಹಿ ದುರ್ಗತಿಂ ॥
ಗುರೋರತ್ಯಂತಭಕ್ತಸ್ಯ ಶಿಷ್ಯಸ್ಯೇಹ ಪರತ್ರಚ ।
ನ ಕಿಂಚಿದ್ದುರ್ಲಭಂ ಬ್ರಹ್ಮನ್ ಸಮಸ್ತಂ ಸುಲಭಂ ಸದಾ ॥
ಅಥ ಕಿಂಬಹುನೋಕ್ತೇನ ಗುರುದೇವೋ ಮಹೇಶ್ವರಃ ।
ಪ್ರತ್ಯಕ್ಷೇವಾ ಪರೋಕ್ಷೇವಾ ಗುರೋಃ ಪ್ರೀತಿಂ ಸಮಾಚರೇತ್ ॥
ಗುರುಪ್ರೀತಿಕರಃ ಶಿಷ್ಯೋ ಯಃ ಸ ಪ್ರೀತಿಕರೋ ಮಮ ।
ತಸ್ಯ ಪ್ರಿಯಕರಃ ಶಿಷ್ಯೋ ಮಮಪ್ರಿಯಕರೋ ಭೃಶಂ ॥

ತಸ್ಮಾತ್ಸರ್ವಪ್ರಯತ್ನೇನ ಗುರೋಃ ಪ್ರೀತಿಕರೋ ಭವೇತ್ ।
ಗುರುಭಕ್ತಿಂ ವಿನಾ ತಸ್ಯ ಮಯಿ ಭಕ್ತಿರ್ವೃಥಾ ಭವೇತ್ ॥
ಶಿಷ್ಯಸ್ತಸ್ಮಾತ್ಪ್ರಯತ್ನೇನ ಗುರೌ ಭಕ್ತಿಂ ಸಮಾಚರೇತ್ ।
ಯಃ ಕಶ್ಚಿದ್ಗುರುಭಕ್ತಃ ಸ್ಯಾತ್ಸಯಾತಿ ಪರಮಾಂಗತಿಂ ॥

ಇತಿ ವೀರಶೈವಾಚಾರಪ್ರದೀಪಿಕಾಯಾಂ.

ಈ ಎಲ್ಲ ಆಧಾರಗಳಿಂದ ಗುರುವಿನಿಂದ ಕೊಡಲ್ಪಟ್ಟ ಲಿಂಗವು ಯಾವನ (ವಿರಕ್ತನೇ ಆಗಲಿ ಸರಕ್ತನೇ ಆಗಲಿ) ಎದೆಯಮೇಲೆ ಇರುತ್ತದೆಯೋ ಅಂಥ ಶಿಷ್ಯನು ಗುರುವಿನಲ್ಲಿ ತಿರಸ್ಕಾರಬುದ್ಧಿಯನ್ನಿಡದೆ ಪೂರ್ಣವಾಗಿ ಪೂಜ್ಯಬುದ್ಧಿಯನ್ನಿಟ್ಟು ನಡೆದುಕೊಳ್ಳತಕ್ಕದ್ದು. ಇಲ್ಲದಿದ್ದರೆ ಶಾಸ್ತ್ರೋಕ್ತದೋಷವು ಅವನನ್ನು ಎಂದೂ ಬಿಡಲಾರದು. ಆದಕಾರಣ ನಮ್ಮ ಈ ಶಾಸ್ತ್ರಗಳೇ ಆಗಲಿ ಅಥವಾ ಇವರ ಅನುಯಾಯಿಗಳೇ ಆಗಲಿ ಇಲ್ಲಿಯವರೆಗೆ ಶಾಸ್ತ್ರತತ್ವವನ್ನು ವಿಚಾರಿಸದೆ ಮಹಾಗುರುಗಳಾದ ಭಗವತ್ಪಾದ ಜಗದ್ಗುರು ಪಂಚಾಚಾರ್ಯರ ವಿಷಯದಲ್ಲಿ ದುರ್ಮಾರ್ಗದಿಂದ ವರ್ತಿಸಿದ್ದನ್ನು ಪ್ರಾಯಶ್ಚಿತ್ತಮೂಲಕವಾಗಿ ದೂರಮಾಡಿಕೊಂಡು ಶುದ್ಧಾಂತಃಕರಣವುಳ್ಳವರಾಗಿ ಇನ್ನುಮೇಲೆ ಆ ಗುರುಗಳಲ್ಲಿ ಅಸಾಧಾರಣ ಭಕ್ತಿಯುಳ್ಳವರಾಗಿ ಮುಕ್ತಿಸುಖವನ್ನು ಅನುಭವಿಸಬೇಕು.

ಶಿವಂಭೂಯಾತ್ !

**ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರ ಸ್ವಾಮಿತ್ವದಿಂದ**
**ಪ್ರಾದುರ್ಭವಿಸಿರುವ**

# ಶ್ರೀ ಕಾಶೀನಾಥಗ್ರಂಥಮಾಲೆಯಲ್ಲಿ

## ಮುದ್ರಿಸಲ್ಪಟ್ಟಿರುವ ಗ್ರಂಥಗಳು.

---

| | | |
|---|---|---|
| ವೈದಿಕವಾಙ್ಮಯರಹಸ್ಯ | (೧ನೆಯ ಪುಷ್ಪ) | [illegible] ಆಣೆ. |
| ಸಚಿತ್ರ ರೇಣುಕವಿಜಯ | (೨ನೆಯ ಪುಷ್ಪ) | [illegible] ರೂ. |
| ರೇಣುಕಾಚಾರ್ಯಶತಕ | (೩ನೆಯ ಪುಷ್ಪ) | [illegible] |
| ಮಾಹೇಶ್ವರದೀಕ್ಷಾವಿಧಿ | (೪ನೆಯ ಪುಷ್ಪ) | ೧[illegible] |
| ವೀರಶೈವರತ್ನ | (೫ನೆಯ ಪುಷ್ಪ) | ೧[illegible] ಆಣೆ. |
| ಸಿದ್ಧಾಂತಶಿಖೋಪನಿಷದ್ಭಾಷ್ಯ | (೬ನೆಯ ಪುಷ್ಪ) | ೧ ರೂ. |
| ಸಿದ್ಧಾಂತಸಾರಾವಳಿ | (೭ನೆಯ ಪುಷ್ಪ) | ೧೨ ಆಣೆ. |
| ಬಸವಧ್ವಾಂತದಿವಾಕರ | (೮ನೆಯ ಪುಷ್ಪ) | ೪ ಆಣೆ. |
| ಆಗಮಪರಿಜ್ಞಾನ | (೯ನೆಯ ಪುಷ್ಪ) | ೩ ಆಣೆ. |
| ಗೋತ್ರಸೂತ್ರಪಟ | (೧೦ನೆಯ ಪುಷ್ಪ) | ೧ ಆಣೆ. |
| ಪಂಚಾಚಾರ್ಯಾಷ್ಟೋತ್ತರಶತನಾಮಾವಳಿ | (೧೧ನೆಯ ಪುಷ್ಪ) | ೨ ಆಣೆ. |
| Speeches by Pandit Shri Kashinathashastri (*in English*) | (೧೨ನೆಯ ಪುಷ್ಪ) | 12 As. |
| ಪಂಡಿತ ಶ್ರೀ ಕಾಶೀನಾಥಶಾಸ್ತ್ರುಲವಾರಿ ಭಾಷಣಮು (ತೆಲುಗು) | (೧೩ನೆಯ ಪುಷ್ಪ) | ೮ ಆಣೆ. |
| ಶಿವಶಕ್ತಿವಿಲಾಸ | (೧೪ನೆಯ ಪುಷ್ಪ) | ೨ ಆಣೆ. |
| ಬಸವಾದಿನಿಜತತ್ತ್ವದರ್ಪಣ | (೧೫ನೆಯ ಪುಷ್ಪ) | ೨ ಆಣೆ. |
| ಸಂಕ್ಷಿಪ್ತ ಶಿವಪೂಜಾವಿಧಿ | (೧೬ನೆಯ ಪುಷ್ಪ) | ೧ ಆಣೆ. |
| ಸನ್ಯಾಸಾಶ್ರಮವಿಮರ್ಶ | (೧೭ನೆಯ ಪುಷ್ಪ) | ೧ ಆಣೆ. |
| ರೇಣುಕವಿಜಯಪುರಾಣ | (೧೮ನೆಯ ಪುಷ್ಪ) | ೧ ರೂ. |
| ಪಂಚಾಚಾರ್ಯಸ್ತೋತ್ರರತ್ನಾಕರ | (೧೯ನೆಯ ಪುಷ್ಪ) | ೧೨ ಆಣೆ. |
| ಶ್ರೀ ಗುರುತತ್ತ್ವಪದಗಳು | (೨೦ನೆಯ ಪುಷ್ಪ) | ೨ ಆಣೆ. |
| ವೀರಶೈವಾಚಾರವಿಧಿ | (೨೧ನೆಯ ಪುಷ್ಪ) | ೩ ಆಣೆ. |
| ಶಿವಾದ್ವೈತಮಂಜರಿ | (೨೨ನೆಯ ಪುಷ್ಪ) | ೮ ರೂ. |
| ಶಿಖಾಸೂತ್ರಸಿದ್ಧಾಂತದರ್ಪಣ | (೨೩ನೆಯ ಪುಷ್ಪ) | ೧೨ ಆಣೆ. |
| ಸನ್ಯಾಸಾಶ್ರಮವಿಮರ್ಶತತ್ತ್ವಸ್ಥಿರೀಕರಣ | (೨೪ನೆಯ ಪುಷ್ಪ) | ೬ ಆಣೆ. |

ಈ ಎಲ್ಲಾ ಗ್ರಂಥಗಳು [illegible] ದೊರೆಯುತ್ತವೆ.